

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಆದಿಲಶಾಹಿ ಆಸ್ಥಾನ ಸಾಹಿತ್ಯ

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ



# ಆದಿಲಶಾಹಿ ಆಸ್ಥಾನ ಸಾಹಿತ್ಯ

ಡಾ. ಕೃಷ್ಣ ಕೊಲ್ಹಾರಕುಲಕರ್ಣಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ADILASHAHI ASTHANA SAHITYA – By Dr. Krishna Kolhara Kulakarni. Published by The Director, Prasaranga, Kannada University, Hampi, Vidyaranya, Kamalapura – 583 221.

First Impression: 1998, Pp: vi+48, Rs.40–00



**ಪ್ರಕಾಶಕರು**

ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

**ಬೆಲೆ : ರೂ. ೪೦.**

**ಮುಖಪುಟ ಕೆ. ಕೆ. ಮಕಾಳಿ**

ಮುದ್ರಣ
ನೇತ್ರಾ ಪ್ರಿಂಟರ್ಸ್
ಬೆಂಗಳೂರು

*

# ದೇಸಿಯೊಳ್ ಪುಗುವುದು

ಡಾ. ಎಂ. ಎಂ. ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಮೂಲತಃ ಸಮಾಜವೊಂದು ಸ್ವ-ರೂಪ, ಸ್ವ-ಭಾವ ವಿಶಿಷ್ಟವಾಗಿರುತ್ತದೆ. ಹೀಗಿದ್ದೂ ಅದು ತನ್ನಷ್ಟಕ್ಕೆ ತಾನು ಪ್ರತ್ಯೇಕವಾಗಿ ನಿಲ್ಲದೆ, ಅನ್ಯಸಂಸ್ಕೃತಿಗಳನ್ನು ಸ್ವೀಕರಿಸುತ್ತ, ನಿರಾಕರಿಸುತ್ತ ಒಮ್ಮೊಮ್ಮೆ ತಿರಸ್ಕರಿಸುತ್ತ ಮುಂದುವರಿಯುತ್ತದೆ. ಪ್ರಧಾನವಾಗಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯವನ್ನು ನಮ್ಮಲ್ಲಿ ಹುಟ್ಟಿಸಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ, ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ವ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು

ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ ಪೂರೈಸಬೇಕಾದ ಇನ್ನೊಂದು ಕೆಲಸವೆಂದರೆ 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ ಎಂಬಂತೆ' ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣಮಾಡುವುದು. ಈ ರೀತಿ ಐತಿಹಾಸಿಕ ಪರಂಪರೆ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಲ್ಲಾದರೂ ಇರು, ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆಗಳನ್ನು, ಚಿಂತನೆಗಳನ್ನು ದಾಖಲಿಸಬೇಕೆನ್ನುವ ಮತ್ತು ಸಂವಹನಗೊಳಿಸಬೇಕೆನ್ನುವ ಕನ್ನಡ ವಿಶ್ವವಿದ್ಯಾಲಯ, ಯೋಗ್ಯ ಪ್ರಸಾರಮಾಧ್ಯಮಗಳನ್ನು ಅವಲಂಬಿಸಬೇಕಾಗುತ್ತದೆ. ಈ ಮೇರೆಗೆ ಈ ಸಂಸ್ಥೆಯ ಪ್ರಸಾರಾಂಗ ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಯ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಇವುಗಳಲ್ಲಿ ವಾಚನ ಸಾಮಗ್ರಿಯಾಗಿರುವ ಪುಸ್ತಕಗಳಿಗೆ ಹೆಚ್ಚಿನ ಮಹತ್ವವಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕಸಂಸ್ಕೃತಿ' ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಪ್ರಸಾರಾಂಗದ ಇತ್ತೀಚಿನ ಕೃತಿಯಾಗಿದೆ 'ಆದಿಲಶಾಹಿ ಆಸ್ಥಾನಸಾಹಿತ್ಯ'.

ಕರ್ನಾಟಕದಲ್ಲಿ ಕನ್ನಡ ಸಾಹಿತ್ಯದ ಜೊತೆ ಸೃಷ್ಟಿಯಾಗುತ್ತ ಬಂದ ಅನ್ಯಭಾಷಾ ಸಾಹಿತ್ಯ ತುಂಬ ಉಪೇಕ್ಷೆಗೆ ಗುರಿಯಾಗಿದೆ. ಇವುಗಳಲ್ಲಿ "ಆದಿಲಶಾಹಿ ಆಸ್ಥಾನಸಾಹಿತ್ಯ" ಮುಖ್ಯವೆನಿಸಿದೆ. ಈ ಪುಸ್ತಕದ ಮೂಲಕ ಇದನ್ನು ಪ್ರಥಮ ಸಲ ಪರಿಚಯಿಸಿಕೊಟ್ಟ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

# ಕೃತಜ್ಞತೆಗಳು

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಂ. ಎಂ. ಕಲಬುರ್ಗಿಯವರು ಮೊದನಿಂದಲೂ ಆದಿಲಶಾಹಿ ಕಾಲದ ಸಾಹಿತ್ಯದ ಕುರಿತು ತುಂಬ ಆಸ್ಥೆ ಹೊಂದಿದವರಾಗಿದ್ದಾರೆ. ಸಮಕಾಲೀನ ಅನ್ಯಭಾಷೆಯ ಕೃತಿಗಳ ಅಭ್ಯಾಸವಾಗದ ಹೊರತು ಕರ್ನಾಟಕದ ಚರಿತ್ರೆ ಪೂರ್ತಿಗೊಳ್ಳುವುದಿಲ್ಲ ಎಂದು ನಂಬಿದವರಲ್ಲಿ ಅವರು ಪ್ರಮುಖರು. ಅವರು ಕುಲಪತಿಗಳಾಗಿ ಅಧಿಕಾರ ವಹಿಸಿಕೊಂಡ ತಕ್ಷಣ ಈ ಕುರಿತು ಬರೆಯುತ್ತ, ಉಪೇಕ್ಷಿತ ಸಾಹಿತ್ಯ ಮಾಲಿಕೆಯ ಅಡಿಯಲ್ಲಿ "ಆದಿಲಶಾಹಿ ಆಸ್ಥಾನ ಸಾಹಿತ್ಯ" ಕುರಿತು ಎರಡು ಉಪನ್ಯಾಸಗಳನ್ನು ಏರ್ಪಡಿಸಿ ನನ್ನನ್ನು ಆಮಂತ್ರಿಸಿದರು. ಆ ಉಪನ್ಯಾಸಗಳ ಸಾರ ಈ ಪುಸ್ತಕ.

ಇನ್ನೂರು ವರುಷಗಳ ವರೆಗೆ ಕರ್ನಾಟಕದ ಬಹುಭಾಗವನ್ನು ಆಳಿದ ಆದಿಲಶಾಹಿಗಳ ಸಂಪೂರ್ಣ ಚರಿತ್ರೆಯನ್ನು ಅವರ ಹಾಗೂ ಇತರರ ಮುಖಾಂತರ ತಿಳಿಯದ ಹೊರತು ಕರ್ನಾಟಕದ ಚರಿತ್ರೆ ಪೂರ್ಣಗೊಳ್ಳುವುದಿಲ್ಲ. ಈ ದಿಶೆಯಲ್ಲಿ ಇದೊಂದು ಪುಟ್ಟ ಹೆಜ್ಜೆ. ಈ ಹೆಜ್ಜೆಯನ್ನಿಡಲು ಅನುವು ಮಾಡಿಕೊಟ್ಟ ಡಾ. ಎಂ. ಎಂ. ಕಲಬುರ್ಗಿ ಅವರಿಗೆ ನನ್ನ ಅನಂತ ಕೃತಜ್ಞತೆಗಳು.

ಈ ಪುಸ್ತಕವನ್ನು ಪ್ರಕಟಿಸುತ್ತಿರುವ ಕನ್ನಡ ವಿಶ್ವವಿದ್ಯಾಲಯದ, ಪ್ರಸಾರಾಂಗದ ಮುಖ್ಯಸ್ಥರಾದ ಪ್ರೊ. ನಾವಡ ಹಾಗೂ ಅವರ ಸಿಬ್ಬಂದಿಯನ್ನು ಇಲ್ಲಿ ನೆನೆಯುವೆ.

ವಿಜಾಪುರ
೭.೧೦.೯೮

**ಕೃಷ್ಣ ಕೊಲ್ಹಾರಕುಲಕರ್ಣಿ**

## ಪರಿವಿಡಿ

ಅಧ್ಯಾಯ ಒಂದು

# ಪೀಠಿಕೆ

ಬಹಮನಿ ರಾಜ್ಯದಲ್ಲಿ (ಕ್ರಿ. ಶ. ೧೩೪೭-೧೪೮೯) ಒಂದು ಪ್ರಾಂತ್ಯವಾಗಿದ್ದ ವಿಜಾಪುರದಲ್ಲಿ ತುರ್ಕಿ ಮೂಲದ ಯುಸೂಫಖಾನನು ರಾಜ್ಯಪಾಲನಾಗಿದ್ದನು. ರಾಜ್ಯ ಒಡೆದು ಐದು ಶಾಹಿ ರಾಜ್ಯಗಳಾದಾಗ ಯುಸೂಫಖಾನನು ಕ್ರಿ. ಶ. ೧೪೮೯ರಲ್ಲಿ ತನ್ನ ಸ್ವಾತಂತ್ರ್ಯವನ್ನು ಸಾರಿ, ವಿಜಾಪುರದಲ್ಲಿ ಹೊಸ ಆದಿಲಶಾಹಿ ರಾಜ್ಯವನ್ನು ಪ್ರಾರಂಭಿಸಿದನು.

ರಾಜ್ಯಪಾಲ ಯುಸೂಫಖಾನನು ರಾಜನಾಗಿ ಯುಸೂಫ ಆದಿಲಖಾನನಾದ ಮೇಲೆ, ಸಹ್ಯಾದ್ರಿ ಪರ್ವತದ ಒಂದು ಕೋಟೆಯಲ್ಲಿ ರಾಜ್ಯ ನಿರ್ವಹಿಸುತ್ತಿದ್ದ ಮುಕುಂದರಾವ್ ಎಂಬ ಮರಾಠಾ ಸರದಾರನನ್ನು ಸೋಲಿಸಿ, ಅವನ ತಂಗಿಯನ್ನು ಮದುವೆಯಾದನು. ಯುಸೂಫ ಹಾಗೂ ಮುಕುಂದರಾಯನ ತಂಗಿ, ಇವರಿಬ್ಬರ ಸಂತತಿ ಮುಂದಿನ ದಿನಗಳಲ್ಲಿ ಸುಮಾರು ಎರಡು ಶತಮಾನಗಳಷ್ಟು ಕಾಲ ವಿಜಾಪುರ ರಾಜಧಾನಿಯಿಂದ ಆದಿಲಶಾಹಿ ರಾಜ್ಯವನ್ನು ಆಳಿತು. 'ಆದಿಲ್' ಎಂಬುದು ಪರ್ಶಿಯನ್ ಶಬ್ದ. ಅದರ ಅರ್ಥ 'ನ್ಯಾಯ' ಎಂಬುದೇ ಆಗಿದೆ.

ಯುಸೂಫಖಾನನು ವಿಜಾಪುರದಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಪ್ರಾರಂಭಿಸುವ ಹೊತ್ತಿಗೆ, ತುಂಗಭದ್ರೆಯ ದಡದಲ್ಲಿ ವಿಜಯನಗರದ ಸಾಮ್ರಾಜ್ಯವು ತನ್ನ ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿತು. ರಾಜಕೀಯ ಸಾಮಾಜಿಕ ಹಾಗೂ ಧಾರ್ಮಿಕ ರಂಗಗಳಲ್ಲಿ ತನ್ನದೇ ಆದ ವೈಶಿಷ್ಟ್ಯಗಳೊಂದಿಗೆ ಅದು ಮೆರೆಯುತ್ತಿತ್ತು. ಸಾಹಿತ್ಯ ಶಿಲ್ಪಕಲೆ, ಸಂಗೀತ ಇತ್ಯಾದಿಗಳು ಕೂಡ ಅಭಿವೃದ್ಧಿ ಹೊಂದಿದ್ದವು. ಇಂಥದೇ ಒಂದು ಸಾಮ್ರಾಜ್ಯ ಉತ್ತರ ಭಾರತದಲ್ಲಿ ಮೊಗಲರದ್ದಾಗಿತ್ತು. ವಿಜಾಪುರ ರಾಜ್ಯವು ಸ್ವತಂತ್ರ ರಾಜ್ಯವಾಗಿದ್ದರೂ ಸಾಮ್ರಾಜ್ಯವಾಗಿರಲಿಲ್ಲ. ಅದೊಂದು ಪುಟ್ಟ ಸಂಸ್ಥಾನದಷ್ಟಿತ್ತು. ಯುಸೂಫ (ಕ್ರಿ. ಶ. ೧೪೮೯-೧೫೧೦) ಆತನ ಮಗ ಇಸ್ಮಾಯಿಲ್ (ಕ್ರಿ. ಶ. ೧೫೧೦-೧೫೩೪) ಮೊಮ್ಮಗ ಮೊದಲನೆಯ ಇಬ್ರಾಹಿಮ (ಕ್ರಿ. ಶ. ೧೫೩೪-೧೫೫೭) ಇವರು ಆಗೀಗ ಪರಸ್ಪರ ಶಾಹೀ ರಾಜರುಗಳೊಂದಿಗೆ ಹತ್ತೆಂಟು ಹಳ್ಳಿಗಳಿಗಾಗಿ ಬಡಿದಾಡುವಲ್ಲಿ, ಯಾವಾಗಾದರೊಮ್ಮೆ ವಿಜಯನಗರದವರೊಂದಿಗೆ ಕಾಲು ಕೆದರಿ ಯುದ್ಧಮಾಡಿ ಒಂದು ಕೋಟೆಯನ್ನು ಗೆಲ್ಲುವಲ್ಲಿ ಅಥವಾ ಸೋಲುವಲ್ಲಿ ತೃಪ್ತಿ ಪಡುತ್ತಿದ್ದರು. ಗೆದ್ದಾಗ ಸಿಕ್ಕಷ್ಟನ್ನು ದೋಚಿಕೊಂಡು ಬಂದು ವಿಜಾಪುರದ ಭಂಡಾರವನ್ನು ತುಂಬಿಕೊಳ್ಳುತ್ತಿದ್ದರು.

ಮುಕ್ಕಾಲು ಶತಮಾನ ಹೀಗೆ ಕುಂಟುತ್ತ ಸಾಗಿದ್ದ ಆದಿಲಶಾಹಿ ರಾಜ್ಯದ ದೈವ ತೆರೆದದ್ದು, ಕ್ರಿ. ಶ ೧೫೬೫ರ ರಕ್ಕಸಗಿ ತಂಗಡಗಿ ಕಾಳಗದಲ್ಲಿ! ಈ ಘನಘೋರ ಕಾಳಗದಲ್ಲಿ

ಎಲ್ಲ ಶಾಹಿ ರಾಜರು ಒಗ್ಗಟ್ಟಾಗಿ ವಿಜಯನಗರ ರಾಜನನ್ನು ಸೋಲಿಸಿದರು. ಅಳಿಯ ರಾಮರಾಯನು ಕಾಳಗದಲ್ಲಿಯೆ ಹತನಾದನು. ಈ ಕಾಳಗದ ರೂವಾರಿ ವಿಜಾಪುರದ ಆದಿಲಶಾಹಿ ರಾಜ್ಯದ ಮೊದಲ ಇಬ್ರಾಹಿಮನ ಮಗ ಮೊದಲ ಅಲಿ ಆದಿಲಶಹನೇ ಆಗಿದ್ದ. ಆತನ ಕಾಲ ಕ್ರಿ. ಶ ೧೫೫೮–೧೫೮೦. ಆದಿಲಶಾಹಿ ರಾಜ್ಯದ ಉಚ್ಛ್ರಾಯ ಕಾಲ ಪ್ರಾರಂಭವಾದದ್ದು ಇಲ್ಲಿಂದ. ಆ ವರೆಗೆ 'ಕೃಷ್ಣಾ ಮಲಪ್ರಭಾ' ನದಿಗಳ ಮಧ್ಯಕ್ಕೆ ಸೀಮಿತವಾಗಿದ್ದ ಆದಿಲಶಾಹಿ ರಾಜ್ಯ, ಈ ಕಾಳಗದಿಂದ ಒಮ್ಮೆಲೆ ಪಶ್ಚಿಮ ಪೂರ್ವಗಳಲ್ಲಿ ಕೊಂಕಣದಿಂದ ಕೃಷ್ಣಾ ತುಂಗಭದ್ರೆಯರ ಸಂಗಮದ ಪ್ರದೇಶದವರೆಗೂ ವಿಸ್ತಾರವಾಯಿತು. ಹೀಗೆ ದೊರೆತ ಫಲವತ್ತಾದ ಪ್ರದೇಶ ಹಾಗೂ ಕಾಳಗದ ಅನಂತರ ಕೊಳ್ಳೆ ಹೊಡೆದು ತಂದ ವಿಜಯನಗರದ ಸಂಪತ್ತು ಮುಂದಿನ ದಿನಗಳಲ್ಲಿ ವಿಜಾಪುರ ನಗರ ಹಾಗೂ ರಾಜ್ಯದ ಅದ್ಭುತ ಪ್ರಗತಿಗೆ ನಾಂದಿಯಾಯಿತು.

ಮುಂದಿನ ಸುಮಾರು ನೂರಾ ಇಪ್ಪತ್ತು ವರುಷಗಳಲ್ಲಿ ವಿಜಾಪುರವನ್ನು ನಾಲ್ವರು ಆದಿಲಶಾಹಿ ಬಾದಶಹರು ಆಳಿದರು. ಅವರಲ್ಲಿ ಮೊದಲ ಅಲಿಯ ಅಣ್ಣನ ಮಗ ಎರಡನೆಯ ಇಬ್ರಾಹಿಮ ಆದಿಲಶಹ (ಕ್ರಿ. ಶ. ೧೫೮೦–೧೬೨೭) ಅವನ ಮಗ ಮಹಮ್ಮದ ಆದಿಲಶಹ (ಕ್ರಿ. ಶ. ೧೬೨೭–೧೬೫೬) ಮುಖ್ಯರು. ಅವರ ಕಾಲದಲ್ಲಿ ಆದಿಲಶಾಹಿ ರಾಜ್ಯವು ಸಾಮ್ರಾಜ್ಯವಾಗಿ ವೈಭವದ ತುತ್ತತುದಿಯನ್ನು ಮುಟ್ಟಿತು. ಕ್ರಿ. ಶ. ೧೬೫೬ರಲ್ಲಿ ಮಹಮ್ಮದ ಆದಿಲಶಹನು ಮರಣ ಹೊಂದಿದಾಗ, ದಕ್ಷಿಣೋತ್ತರ ತಂಜಾವೂರದಿಂದ ಮುಂಬಯಿ ಹಾಗೂ ಪಶ್ಚಿಮದಿಂದ ಪೂರ್ವಕ್ಕೆ ಗೋವೆಯಿಂದ ಕೃಷ್ಣೆ ತುಂಗೆಯರ ಸಂಗಮದವರೆಗೂ ಆದಿಲಶಾಹಿ ರಾಜ್ಯ ಹಬ್ಬಿಕೊಂಡಿತ್ತು. ಮಹಮ್ಮದನ ಮಗ ಎರಡನೆಯ ಅಲಿ ಆದಿಲಶಹನ (ಕ್ರಿ. ಶ. ೧೬೫೬–೧೬೭೨) ಕಾಲದಲ್ಲಿ ಆದಿಲಶಾಹಿ ರಾಜ್ಯದ ಅವನತಿಗೆ ಪ್ರಾರಂಭವಾಗಿ, ಅವನ ಮಗ ಸಿಕಂದರ (ಕ್ರಿ. ಶ. ೧೬೭೨–೧೬೮೬)ನ ಕಾಲದಲ್ಲಿ ಕ್ರಿ. ಶ. ೧೬೮೬ರಲ್ಲಿ ವಿಜಾಪುರವು ಔರಂಗಜೇಬನ ವಶವಾಗಿ, ದೆಹಲಿಯ ಮೊಗಲ ಸಾಮ್ರಾಜ್ಯದಲ್ಲಿ ಸೇರಿಕೊಂಡಿತು.

## ಅಕ್ಷರಪ್ರಿಯ ಬಾದಶಹರು

ವಿಜಾಪುರದ ಬಾದಶಹರು ಅಕ್ಷರ ಪ್ರಿಯರಾಗಿದ್ದರು. ಕೆಲವು ರಾಣಿಯರು ಕೂಡ ಸಾಹಿತ್ಯ ಸಂಗೀತ ಲಲಿತ ಕಲೆಗಳಲ್ಲಿ ಆಸಕ್ತರಾಗಿದ್ದರು. ಆದಿಲಶಾಹಿ ಬಾದಶಹರು ಶ್ರೇಷ್ಠ ಯೋಧರಾಗಿದ್ದಂತೆ ಸಾಮಾಜಿಕ ಕಳಕಳಿ ಉಳ್ಳವರೂ ಆಗಿದ್ದರು. ಸಾಹಿತ್ಯ ಸಂಗೀತ ಕಲೆಗಳ ಪೋಷಕರೂ ಆಗಿದ್ದರು. ಸ್ವತಃ ಸಾಹಿತಿಗಳು, ಸಂಗೀತಗಾರರು, ಕಲಾವಿದರು ಆಗಿದ್ದರು.

ಆದಿಲಶಾಹಿ ರಾಜ್ಯದ ಸ್ಥಾಪಕ ಯುಸೂಫ ಆದಿಲಖಾನನು ಕಾವ್ಯ ಪ್ರೇಮಿಯಾಗಿದ್ದನು. ಕವಿಯಾಗಿ ಕೆಲವು ಕೃತಿಗಳನ್ನು ರಚಿಸಿದ್ದನು. ಪರ್ಶಿಯಾದಿಂದ ಹೆಸರಾಂತ ಕವಿ ಸಾಹಿತಿಗಳನ್ನು ಕರೆಯಿಸಿಕೊಂಡಿದ್ದನು. ಯುಸೂಫನು ಸ್ವತಃ ಸಂಗೀತಗಾರನೂ ಆಗಿದ್ದನು. ಸಂಗೀತದಲ್ಲಿಯ ಆತನ ಅಭಿರುಚಿ ಹಾಗೂ ಪರಿಣತಿಗಳು ಸಮಕಾಲೀನ ಸಂಗೀತಗಾರರಿಗಿಂತ ಶ್ರೇಷ್ಠವಾಗಿದ್ದವು. ಆತ ಸ್ವತಃ ಎರಡು ಮೂರು ಬೇರೆ ಬೇರೆ ತರಹದ ವಾದ್ಯಗಳನ್ನು ನುಡಿಸುತ್ತಿದ್ದನು; ಅ

ಕೃತಿಗಳನ್ನು ಸ್ವತಃ ಹಾಡುತ್ತಿದ್ದನು– ಎಂದು ಖ್ಯಾತ ಇತಿಹಾಸಕಾರ ಫರಿಸ್ತಾ ಹೇಳುತ್ತಾನೆ. ಯುಸೂಫನು ತಂಬೂರಿ ಹಾಗೂ ಉದ ಎಂಬ ವಾದ್ಯಗಳಲ್ಲಿ ಪರಿಣತನಾಗಿದ್ದನೆಂದು ಇನ್ನೊಬ್ಬ ಇತಿಹಾಸಕಾರ ಬಶೀರುದ್ದೀನ ಅಹ್ಮದ ಹೇಳುತ್ತಾನೆ. ಆತನ ಆಸ್ಥಾನದಲ್ಲಿ ಹಲವಾರು ಜನ ಕವಿ–ಸಾಹಿತಿಗಳೂ, ಸಂಗೀತಗಾರರೂ ಇದ್ದರು. ಅವರಲ್ಲಿ ಉಸ್ತಾದ ಗಿಲಾನಿ ಹಾಗೂ ಹುಸೇನ ಕಾಜವಿನಿ ಎಂಬವರು ಖ್ಯಾತ ಗಾಯಕರಾಗಿದ್ದರು. ಅವರು ಹಾಡುವ ಗಜಲ್‌ಗಳಿಗೆ ಆರು ಸಾವಿರ 'ಹಂಸ' (ಹೊನ್ನು)ಗಳನ್ನು ದೊರೆ ಕೊಡುತ್ತಿದ್ದನಂತೆ. ಹುಸೇನ ಕಾಜವಿನಿ 'ಕಾನುನ್' ಎಂಬ ವಾದ್ಯವನ್ನು ಚೆನ್ನಾಗಿ ನುಡಿಸುತ್ತಿದ್ದನು.

ಯುಸೂಫನ ಮಗ ಇಸ್ಮಾಯಿಲ್ ಕೂಡ ಕಾವ್ಯ ಸಂಗೀತಗಳಲ್ಲಿ ನಿರತನಾಗಿರುತ್ತಿದ್ದನು. ಇತಿಹಾಸದ ಪುಟಗಳಲ್ಲದೆ ಸಮಕಾಲೀನ ಬಣ್ಣದ ಚಿತ್ರಗಳೂ ಇದನ್ನು ದೃಢ ಪಡಿಸುತ್ತವೆ. ಒಂದು ಚಿತ್ರದಲ್ಲಿ ಇಸ್ಮಾಯಿಲ್ ಆದಿಲ್‌ಖಾನನು ಸಿತಾರ್ ವಾದ್ಯವನ್ನು ನುಡಿಸುತ್ತ ಕುಳಿತದ್ದನ್ನು ಕಾಣಿಸಲಾಗಿದೆ.

ಇಸ್ಮಾಯಿಲನ ಮಗ ಮೊದಲ ಇಬ್ರಾಹಿಮನ ಕಾಲದಲ್ಲಿ ದಖಣಿ ಸಾಹಿತ್ಯಕ್ಕೆ ರಾಜಾಶ್ರಯ ದೊರೆಯಿತು. ಆತನ ಕಾಲದಲ್ಲಿ ಧರ್ಮ ಪ್ರಚಾರಕ್ಕೆಂದೇ ಬಂದ ಸೂಫಿ ಸಂತರು ಕೂಡ, ದಖಣಿ ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದರು. ಮೊದಲ ಇಬ್ರಾಹಿಮನ ಮಗ ಮೊದಲ ಅಲಿ ಆದಿಲಶಹ ಕೂಡ ಸಾಹಿತ್ಯದಲ್ಲಿ ಆಸಕ್ತನಾಗಿದ್ದನು. ಆತನ ಹೆಂಡತಿ ಚಾಂದಬೀಬಿ ಸುಪ್ರಸಿದ್ಧ ಕಲಾವಿದೆ, ಕವಯಿತ್ರಿ.

ಅನಂತರ ಪಟ್ಟಕ್ಕೆ ಬಂದ ಎರಡನೆಯ ಇಬ್ರಾಹಿಮ ಸ್ವತಃ ಕವಿ. ಕಿತಾಬೆ–ನೌರಸ ಕೃತಿಯನ್ನು ರಚಿಸಿದ. ಆತನ ಆಸ್ಥಾನದಲ್ಲಿ ಮುನ್ನೂರಕ್ಕೂ ಅಧಿಕ ಕವಿ ಸಾಹಿತಿಗಳಿದ್ದರು ಎಂದು ಹೇಳಲಾಗುತ್ತದೆ. ಜುಹೂರಿಯಂಥ ವಿಶ್ವವಿಖ್ಯಾತ ಕವಿ, ಫಿರಿಶ್ತಾನಂಥ ಇತಿಹಾಸಕಾರ, ಅಬ್ದುಲ್ಲಾ ದೇಹಲವಿ ಮೊದಲಾದವರು ಆತನ ಆಸ್ಥಾನದಲ್ಲಿಯೇ ಇದ್ದರು. ಆತನ ಮಗ ಮಹ್ಮದ ರಸಿಕ, 'ಮಹಮ್ಮದ ನಾಮಾ' ಬರೆದ ಮಹ್ಮದ ಜುಹೂರಿ ಆತನ ಆಸ್ಥಾನದಲ್ಲಿದ್ದ. ಮಹ್ಮದ ಆದಿಲಶಹನ ಮಗ ಎರಡನೆಯ ಅಲಿ ಆದಿಲಶಹ ಸ್ವತಃ ಕವಿ ಆತನ ಕಾವ್ಯ ಸಂಗ್ರಹ ಉಪಲಬ್ಧವಿದೆ. ಆತನ ಆಸ್ಥಾನದಲ್ಲಿ ಮುಲ್ಲಾ ನುಸ್ರತಿ ಮೊದಲಾದ ಅನೇಕ ಕವಿ ಚರಿತ್ರಕಾರರು ಇದ್ದರು.

ಹೀಗೆ ಆದಿಲಶಾಹಿ ಮನೆತನದ ಬಹುತೇಕ ರಾಜರು ಅಕ್ಷರ ಪ್ರಿಯರಾದ್ದರಿಂದ ಅನೇಕ ಕವಿ, ಸಾಹಿತಿ, ಚರಿತ್ರಕಾರರು ದೇಶ ವಿದೇಶಗಳಿಂದ ಬಂದು ನೆಲೆಸಿದ್ದರಲ್ಲದೆ, ಅರಮನೆಯಲ್ಲಿ ಒಂದು ದೊಡ್ಡ ಗ್ರಂಥಾಲಯವನ್ನೂ ಅವರು ಇಟ್ಟುಕೊಂಡಿದ್ದರೆಂದು ತಿಳಿದು ಬರುತ್ತದೆ.

ಕ್ರಿ. ಶ. ೧೮೪೪ರಲ್ಲಿ ವಿಲ್‌ಮನ್ ಎಂಬವನು ಫ್ರಾನ್ಸ ಸರಕಾರದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಚಿವನಾಗಿದ್ದನು. ವಿಶ್ವದ ಅತಿ ಮಹತ್ತರ ಗ್ರಂಥಗಳನ್ನು ಸಂಗ್ರಹಿಸುವ ಹುಚ್ಚು ಅವನದಾಗಿತ್ತು. ಅಂತೆಯೇ ಆತ ಇದಕ್ಕಾಗಿ ಹಲವಾರು ಜನರನ್ನು ವಿಶ್ವದ ಮೂಲೆ ಮೂಲೆಗಳಿಗೆ ಕಳಿಸಿದ್ದನು. ಅವರು ಕೂಡ ವಿದ್ವಾಂಸರಾಗಿರುತ್ತಿದ್ದರು. ಹಾಗೆ ಸಾಹಿತ್ಯ

ಹಾಗೂ ವೈಜ್ಞಾನಿಕ ಗ್ರಂಥಗಳನ್ನು, ಹಸ್ತ ಪ್ರತಿಗಳನ್ನು ಸಂಗ್ರಹಿಸಲು ಭಾರತಕ್ಕೆ ಬಂದ ಫ್ರೆಂಚ್ ವಿದ್ವಾಂಸ 'ಡೋಬಾ' ಎಂಬುವನು, ಕ್ರಿ. ಶ. ೧೮೪೧ರಲ್ಲಿ ವಿಜಾಪುರಕ್ಕೆ ಬಂದು, ಇಲ್ಲಿಯ ಆಸಾರ ಮಹಲದಲ್ಲಿದ್ದ ಹಸ್ತ ಪ್ರತಿಗಳನ್ನು ಗುರುತಿಸಿ, ಅವುಗಳಿಗೆ ಗೆದ್ದಲು ಹತ್ತಿ ಹಾಳಾಗುತ್ತಿರುವುದನ್ನು ಮೊಟ್ಟ ಮೊದಲ ಬಾರಿಗೆ ಅಂದಿನ ಸಾತಾರಾ ರೆಸಿಡೆಂಟನಿಗೆ ತಿಳಿಸಿದನು. ಬ್ರಿಟಿಷರು ತಮಗೆ ಸೇರಿದ್ದ ಈ ಪ್ರದೇಶದ ಗ್ರಂಥಗಳನ್ನು ಅವರು ಫ್ರೆಂಚರಿಗೆ ಕೊಡಲಿಲ್ಲ. ಅನಂತರ ೧೦ ವರುಷಗಳ ಅವಿರತ ಪ್ರಯತ್ನದಿಂದಾಗಿ ಅಲ್ಲಿಯ ಅಳಿದುಳಿದ ಹಸ್ತ ಪ್ರತಿಗಳು ಕ್ರಿ. ಶ. ೧೮೫೩ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಕಲಕತ್ತೆಯ ಕಾರ್ಯಾಲಯವನ್ನು ಸೇರಿದುವು.[೧] ಅಲ್ಲಿ ದೊರೆತ ಸುಮಾರು ಮುನ್ನೂರಕ್ಕಿಂತ ಅಧಿಕ ಹಸ್ತ ಪ್ರತಿಗಳ ಪಟ್ಟಿಯನ್ನು ಮಾಡಲಾಗಿದೆ. ಈ ಗ್ರಂಥಗಳನ್ನು ಆದಿಲಶಾಹಿ ಅರಸರು ಅಥವಾ ಅವರ ಆಸ್ಥಾನ ಪಂಡಿತರೇ ಬರೆದರೆಂದು ಹೇಳಲು ಖಚಿತ ಆಧಾರಗಳೇನೂ ಇಲ್ಲ. ಅವುಗಳಲ್ಲಿ ಕೆಲವು ಮೂಲ ಗ್ರಂಥಗಳ ನಕಲುಗಳು ಇರಲೂ ಸಾಧ್ಯವಿದೆ. ಬರೆದ ವಿದ್ವಾಂಸರುಗಳಲ್ಲಿ ಹಲವರು ಆದಿಲಶಾಹಿ ಆಸ್ಥಾನದ ಪಂಡಿತರಾಗಿರಲೂಬಹುದು. ದೊರೆತ ಪುಸ್ತಕಗಳ ಪಟ್ಟಿಯನ್ನು ಗಮನಿಸಿದಾಗ ಅವುಗಳಲ್ಲಿ ಬಹುತೇಕ ಹಸ್ತ ಪ್ರತಿಗಳು, ಜನಪ್ರಿಯ ಸಾಹಿತ್ಯ ಪ್ರಕಾರಗಳಾದ ಕಾವ್ಯ ಇತಿಹಾಸಗಳಿಗೆ ಸಂಬಂಧಿಸಿದವುಗಳಾಗಿಲ್ಲ. ವಿಶೇಷವಾಗಿ ಪವಿತ್ರ ಕುರಾನ, ಅದರ ಮೇಲಿನ ಟಿಪ್ಪಣಿಗಳು, ಧರ್ಮಶಾಸ್ತ್ರ, ಸಂಪ್ರದಾಯ, ಉಪದೇಶ, ಯಕ್ಷಿಣಿ ವಿದ್ಯೆ, ಶಬ್ದ ಸಂಗ್ರಹ, ನಿಘಂಟು, ಭಕ್ತಿ, ವಿಮರ್ಶೆ, ಶಬ್ದ ನಿಷ್ಪತ್ತಿ, ವ್ಯಾಕರಣ, ತರ್ಕಶಾಸ್ತ್ರ, ಗಣಿತ, ಅಂಕಗಣಿತ, ಭೂಮಿತಿ, ಜ್ಯೋತಿಷ್ಯಶಾಸ್ತ್ರ, ಖಗೋಳಶಾಸ್ತ್ರ ಇಂಥ ವಿಷಯಗಳಿಗೆ ಸಂಬಂಧಿಸಿದವೇ ಆಗಿವೆ. ಅವುಗಳ ಪಟ್ಟಿಯನ್ನು ಮಾಡುವ ಹೊತ್ತಿಗೆ ಆದಿಲಶಾಹಿ ರಾಜ್ಯ ಹಾಳಾಗಿ ೧೫೦ ವರುಷಗಳಿಗೂ ಅಧಿಕ ಕಾಲವಾಗಿತ್ತು ಎಂಬುದನ್ನು ಗಮನಿಸಿದಾಗ, ಜನಪ್ರಿಯ ಸಾಹಿತ್ಯದ ಕೃತಿಗಳು ಆ ಹೊತ್ತಿಗೆ ಕಾಣೆಯಾಗಿರುವ ಸಾಧ್ಯತೆಯೂ ಇದೆ. ಈ ಕುರಿತು ಸಾತಾರೆಯ ಕಮೀಶನರ ಫ್ರೆರೆ ಎಂಬುವನು ಅಂದಿನ ಮುಂಬಯಿ ಸರಕಾರದ ಕಾರ್ಯದರ್ಶಿ ಮ್ಯಾಲೆಟ್‌ನಿಗೆ ದಿನಾಂಕ ೧೭-೯-೧೮೪೫ ರಂದು ಬರೆದ ಸುದೀರ್ಘ ಪತ್ರದಲ್ಲಿ ಸ್ಪಷ್ಟವಾಗಿ ಹೀಗೆ ಹೇಳುತ್ತಾನೆ:

'There appears also, every reason to believe that many of the more valuable volumes have disappeared bodily during the last thirty or forty years. Cladestinely sold by the needy custodians of the building or by inpacious Government Servants, who had access to the neglected treasures of the library. I found it next to impossible to trace any such theft, but many beautiful specimens of paintings and penmanship were described to me by old men, who could recognise the volumes by no other marks, as having existed in their youth. These volumes has since disappeared and were not now to be found or heard of ; one or two volumes only were recovered, from a person connected

with the building who said he had taken them to read though he was, I believe unable to comprehend a sentence of them.'

ಹೀಗೆ ಕಳೆದು ಹೋಗಿರಬಹುದಾದ ಗ್ರಂಥಗಳಲ್ಲಿ ಜನಪ್ರಿಯ ಇತಿಹಾಸ ಗ್ರಂಥಗಳು, ಕಾವ್ಯಗಳು, ಕಥಾಭಾಗಗಳು, ಸೇರಿರುವ ಸಾಧ್ಯತೆ ಇದೆ. ಗ್ರಂಥಗಳ ಪಟ್ಟಿಯಿಂದ ಒಂದು ಅಂಶವನ್ನು ಸ್ಪಷ್ಟವಾಗಿ ಗುರುತಿಸಬಹುದು. ಆದೆಂದರೆ ಆದಿಲಶಾಹಿ ಆಸ್ಥಾನದಲ್ಲಿ ಹಲವಾರು ಪಂಡಿತ, ವಿದ್ವಾಂಸರುಗಳು ಇದ್ದರು ಹಾಗೂ ಅವರು ವಿವಿಧ ವಿಷಯಗಳಲ್ಲಿ ಗ್ರಂಥಗಳನ್ನು ರಚಿಸುತ್ತಿದ್ದರು.

ಇದಿಷ್ಟು ಆದಿಲಶಾಹಿ ಆಸ್ಥಾನದ್ದೆಂದು ಖಚಿತವಾಗಿ ಹೇಳಲು ಬಾರದ ಸಾಹಿತ್ಯ ಹಾಗೂ ಸಾಹಿತಿಗಳ ಕುರಿತ ವಿವರ. ಇವುಗಳ ಜೊತೆಗೆ ಉಪಲಬ್ಧವಿದ್ದ ಆದಿಲಶಾಹಿ ಕಾಲದ ಸಾಹಿತ್ಯವೂ ಗಣನೀಯ ಪ್ರಮಾಣದಲ್ಲಿದೆ ಎಂಬುದನ್ನು ಮರೆಯಲಾಗದು ಮತ್ತು ಅವುಗಳು ವಿವಿಧ ಭಾಷೆಗಳಲ್ಲಿವೆ. ಪರ್ಶಿಯನ್, ಅರೇಬಿಕ್ ಹಾಗೂ ಸ್ಥಳೀಯ ಭಾಷೆಗಳಲ್ಲಿ ಅಲ್ಲದೆ ಇವುಗಳೆಲ್ಲದರ ಮಿಶ್ರಣದಿಂದುಂಟಾದ ಹೊಸ ಭಾಷೆಯಲ್ಲಿ ವಿಶ್ವ ಮಾನ್ಯ ಕೃತಿಗಳು ರಚಿತವಾದುವು ಎಂಬುದು ವಿಶೇಷವಾಗಿದೆ. ಆದ್ದರಿಂದ ಕೃತಿಗಳ ಅವಲೋಕನದ ಮೊದಲು ಇಲ್ಲಿ ಪ್ರಚಲಿತವಿದ್ದ ಭಾಷೆಗಳ ಪರಿಚಯ ಅಗತ್ಯವೆನಿಸುತ್ತದೆ.



ಅಧ್ಯಾಯ ಎರಡು

# ಪ್ರಚಲಿತ ಭಾಷೆಗಳು

ವಿಜಾಪುರ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶವು ಎಂದಿನಿಂದಲೂ ಕರ್ನಾಟಕದ ಒಂದು ಭಾಗವಾಗಿದೆ. ಆದ್ದರಿಂದ ಇಲ್ಲಿಯ ಜನರಾಡುವ ಭಾಷೆ ಕನ್ನಡವಾಗಿರುವುದೂ ಅಷ್ಟೇ ಸಹಜವಾಗಿದೆ. ಈ ಪ್ರದೇಶದಲ್ಲಿ ಹುಟ್ಟಿದ ಅನೇಕ ಕವಿಗಳು, ವಚನಕಾರರು ಹರಿದಾಸರು, ಸಂತರು ಶ್ರೇಷ್ಠ ಸಾಹಿತ್ಯವನ್ನು ನಿರ್ಮಿಸಿ, ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಆದಿಲಶಾಹಿ ಪೂರ್ವದ ಕವಿಗಳಾದ ರನ್ನ, ನಾಗಚಂದ್ರ, ಬಸವಣ್ಣ ಮೊದಲಾದವರು ಕೆಲವರಾದರೆ, ಆದಿಲಶಾಹಿ ಕಾಲದಲ್ಲಿ ಇಲ್ಲಿಯೇ ಹುಟ್ಟಿ ವಿಜಯನಗರ ಪರಿಸರವನ್ನು ಸೇರಿದ ಅದೃಶ್ಯ ಕವಿ, ತೊರವೆಯ ನರಹರಿ ಕವಿ ಮುಂತಾದವರೂ ಇದ್ದಾರೆ. ಜತೆಗೆ ಇಲ್ಲಿಯೇ ಉಳಿದು ಕನ್ನಡ ಭಾಷೆಯಲ್ಲಿ ಕೃತಿಗಳನ್ನು ರಚಿಸಿದ ಒಂದು ದೊಡ್ಡ ಪಟ್ಟಿಯನ್ನೆ ಉದಾಹರಿಸಬಹುದು. ಈ ಕುರಿತು ಅಧ್ಯಾಯ ನಾಲ್ಕರಲ್ಲಿ ವಿಶದವಾಗಿ ಚರ್ಚಿಸಲಾಗಿದೆ.

ದಕ್ಷಿಣ ಭಾರತದಲ್ಲಿ ಮುಸ್ಲಿಮರ ಪ್ರವೇಶವಾಗಿ, ದೇವಗಿರಿಯ ಯಾದವರ ರಾಜ್ಯ ಮುಸ್ಲಿಮರ ಪಾಲಾದಾಗ, ಅದರ ಒಂದು ಭಾಗವಾಗಿದ್ದ ವಿಜಾಪುರ ಪ್ರದೇಶಕ್ಕೆ ಕ್ರಿ. ಶ. ೧೩೧೨ರಲ್ಲಿ ಕರೀಮುದ್ದೀನನು ಪ್ರಥಮ ರಾಜ್ಯಪಾಲನಾಗಿ ವಿಜಾಪುರಕ್ಕೆ ಬಂದನು. ಅವನೊಂದಿಗೆ ಇನ್ನೊಂದು ಭಾಷೆಯೂ ಬಂದಿತು. ಮುಂದಿನ ದಿನಗಳಲ್ಲಿ ಅವರದೇ ಕಾರ್ಯಭಾರವಾಗಿ ಕೊನೆಗೆ ಇಲ್ಲಿ ಆದಿಲಶಾಹಿ ರಾಜ್ಯ ಸ್ಥಾಪನೆಯಾದಾಗ ಪರ್ಶಿಯನ್ ಭಾಷೆ ಇಲ್ಲಿಯ ರಾಜಭಾಷೆಯಾಯಿತು. ಆಗ ಒಂದು ವಿದೇಶೀ ಭಾಷೆಗೆ ಇಲ್ಲಿ ಉತ್ತೇಜನ ದೊರೆಯಿತು. ಆಸ್ಥಾನದಲ್ಲಿ ಅದಕ್ಕೆ ಆಶ್ರಯ ಹಾಗೂ ಮನ್ನಣೆ ದೊರೆತರೂ ಆ ಭಾಷೆಯನ್ನು ಬಳಸಲು, ಬಳಸಿದವರನ್ನು ಅರ್ಥಮಾಡಿಕೊಳ್ಳಲು ಇಲ್ಲಿ ಸಾಕಷ್ಟು ಜನರಿರಲಿಲ್ಲ. ಪರದೇಶಗಳಿಂದ ಆಮದು ಮಾಡಿಕೊಂಡ ಕೆಲವೇ ಜನರು ಅದನ್ನು ಉಪಯೋಗಿಸುತ್ತಿದ್ದರು. ಸೈನ್ಯದಲ್ಲಿ ಹಾಗೂ ಆಡಳಿತದ ವಿವಿಧ ಹಂತಗಳಲ್ಲಿ ಮತಾಂತರಗೊಂಡ ಉತ್ತರ ಭಾರತದವರು ಹಾಗೂ ಸ್ಥಳೀಯರು ಸೇರಿಕೊಂಡಾಗ, ಅವರಿಗೆ ಪರ್ಶಿಯನ್ ಆಗಲಿ ಅರೇಬಿಕ್ ಆಗಲಿ ಬರುತ್ತಿರಲಿಲ್ಲ. ಉತ್ತರ ಭಾರತದಿಂದ ಬಂದವರು ತಾವು ಅಲ್ಲಿ ಬಳಸುತ್ತಿದ್ದ, ಅಲ್ಲಿ ಪ್ರಚಲಿತದಲ್ಲಿದ್ದ, ಖಡೀ ಬೋಲೀ, ಬಾಂಗಡಾ, ಬುಂದೇಲೀ, ಛತ್ತೀಸಗಡೀ, ಕನೋಜೀ, ಬ್ರಜ್, ಅವಧ, ಮಗಧೀ, ಮೈಥಿಲೀ, ರಾಜಸ್ಥಾನೀ ಮೊದಲಾದ ಭಾಷೆಗಳನ್ನೆ ಬಳಸುತ್ತಿದ್ದರು.

ಯುಸೂಫನ ಹೆಂಡತಿ ಮರಾಠಿ ಸರದಾರನ ತಂಗಿಯಾದದ್ದರಿಂದ ಜನಾನಾದಲ್ಲಿ ಮರಾಠಿ ಭಾಷೆಯ ಪ್ರವೇಶವಾಗಿತ್ತು. ಹೀಗೆ ಮೂಲವಾಗಿ ಇದ್ದ ಕನ್ನಡ ಪ್ರದೇಶದಲ್ಲಿ

ಪರ್ಶಿಯನ್, ಅರೇಬಿಕ್, ಉತ್ತರ ಭಾರತದ ಗ್ರಾಮೀಣ ಭಾಷೆಗಳು ಹಾಗೂ ಮರಾಠಿ ಭಾಷೆಗಳ ಆಗಮನವಾಯಿತು. ರಕ್ಕಸಗಿ ತಂಗಡಗಿ ಕಾಳಗದಲ್ಲಿ ವಿಜಯನಗರ ಸಾಮ್ರಾಜ್ಯವು ಸೋಲನ್ನು ಅನುಭವಿಸಿದಾಗ, ತೆಲುಗು ಭಾಷೆಯ ಕೆಲವು ಪ್ರದೇಶಗಳೂ ರಾಜ್ಯಕ್ಕೆ ಸೇರಿಕೊಂಡವು. ಆಗ ರಾಜಧಾನಿಯಲ್ಲಿ ತೆಲುಗು ಭಾಷೆಯ ಪ್ರವೇಶವೂ ಆಯಿತು. ಆ ಮೊದಲೆ ಪೋರ್ಚುಗೀಜರು ಗೋವೆಯಲ್ಲಿ ಬಂದು ಬೀಡು ಬಿಟ್ಟಿದ್ದರು. ನಿರಂತರ ವ್ಯಾಪಾರ ಸಂಬಂಧದಿಂದಾಗಿ ಪೋರ್ಚುಗೀಜ ಭಾಷೆಯ ಪ್ರಭಾವವೂ ಈ ಪ್ರದೇಶದಲ್ಲಿ ದಟ್ಟವಾಗಿತ್ತು.

ಹೀಗೆ ಹತ್ತು ಹಲವಾರು ಭಾಷೆಗಳ ಸಂಗಮವಾಗಿದ್ದ ಈ ರಾಜ್ಯದ ಸೈನ್ಯದಲ್ಲಿ ವಿವಿಧ ಭಾಷೆಗಳ ಸೈನಿಕರು ಇರುತ್ತಿದ್ದುದು ಸಹಜವಾಗಿತ್ತು. ಅವರು ಪರಸ್ಪರ ಸಂಭಾಷಣೆಯಲ್ಲಿ ತೊಡಗಿದಾಗ ಹರಕು-ಮುರುಕಾಗಿ ಎಲ್ಲ ಭಾಷೆಗಳನ್ನೂ ಬಳಸುವಂತಾಯಿತು. ಇಂಥ ಸಂದರ್ಭ ಬಹಮನಿಗಳ ಕಾಲದಿಂದಲೇ ಪ್ರಾರಂಭವಾದದ್ದು, ಆದಿಲಶಾಹಿ ರಾಜ್ಯದಲ್ಲಿ ಈ ಎಲ್ಲ ಭಾಷೆಗಳ ಸಮ್ಮಿಲನದಿಂದ ಕೆಲವು ದಿನಗಳಲ್ಲಿ ಒಂದು ಹೊಸ ಭಾಷೆಯೇ ರೂಪುಗೊಂಡಿತು! ಬಾಯಿಮಾತಿನಲ್ಲಿ ರೂಪುಗೊಂಡ ಭಾಷೆ ಅಕ್ಷರಗಳಲ್ಲೂ ಮೂಡಿದ್ದು ರೋಚಕ.

**ಹೊಸ ಭಾಷೆಯ ಚರಿತ್ರೆ**

ಆ ಮೊದಲು ಭಾರತೀಯ ಭಾಷೆಗಳೆಲ್ಲವನ್ನೂ ವಿದೇಶಿಯರು 'ಹಿಂದವಿ' ಎಂದೇ ಉಲ್ಲೇಖಿಸುತ್ತಿದ್ದರು. ಪರ್ಶಿಯನ್ ಕವಿ ಅಮಿರ ಖುಸ್ರೋ (ಕ್ರಿ. ಶ. ೧೨೫೩-೧೩೨೫) ತನ್ನ ಒಂದು ಕೃತಿಯಲ್ಲಿ

'ಸಿಂದೀ ವ ಲಾಹೋರೀ ವ ಕಾಶ್ಮೀರಿ ವ ಕಬರ (ಕನರ)
ಧೋರಸಮುಂದರೀ ವ ತಿಲಂಗೀ ವ ಗುಜರ।
ಅಅಬರೀ ವ ಗೌರೀ ವ ಬಂಗಾಲ ವ ಅವದ
ದಿಹಲೀ ವ ಪೈರಾಮನಶ ಅಂದರ ಹಮಾ ಹದ।
ಈನ ಹಮಾ ಹಿಂದೂ ಈಸ್ತ ಕಿ.ಜಿ ಅಯ್ಯಾಮೆ ಕುಹನ
ಆಮಾ ಬಕಾರ ಅಸ್ತ ಬಹರ ಗೂ ನಹ ಸುಖನ ।

ಇಲ್ಲಿ ಅಮೀರ ಖುಸ್ರೋ ಸಿಂಧೀ, ಪಂಜಾಬೀ, ಕಾಶ್ಮೀರೀ, ಕಬರ, ಧೋರಸಮುಂದ್ರೀ ತೆಲುಗು, ಗುಜರಾತಿ, ತಮಿಳು ಗೌಡೀ (ಉಡಿಯ) ಬಂಗಾಲೀ, ಅವಧೀ ಮತ್ತು ದೆಹಲಿಯ ಸುತ್ತ ಮುತ್ತಲಿನ ಭಾಷೆಗಳನ್ನು ಉಲ್ಲೇಖಿಸುತ್ತ ಇವುಗಳೆಲ್ಲವೂ 'ಹಿಂದವೀ' ಭಾಷೆ ಎನ್ನುತಾನೆ. ಇಲ್ಲಿಯ 'ಕಬರ'ವನ್ನೆ ವಿದ್ವಾಂಸರು ಪಾಠಾಂತರವೆಂದು 'ಕನ್ನಡ' ಎಂಬುದಾಗಿ ಊಹಿಸಿದ್ದರೂ 'ಧೋರ ಸಮುಂದ್ರೀ' ಎಂಬುದಾಗಿ ಒಂದು ಪ್ರತ್ಯೇಕ ಭಾಷೆಯ ಉಲ್ಲೇಖ ವಿಶೇಷವಾಗಿದೆ. ಅದು ದ್ವಾರಸಮುದ್ರದ ಹೊಯ್ಸಳರ ಉಚ್ಛ್ರಾಯ ಕಾಲವಾಗಿತ್ತು. ಆಗಿನ್ನೂ ಮರಾಠಿ ಭಾಷೆ ಪ್ರಚಲಿತದಲ್ಲಿದ್ದಿಲ್ಲವೆಂದೇ ಕಾಣುತ್ತದೆ.

ಭಾರತೀಯ ಭಾಷೆಗಳೆಲ್ಲವನ್ನೂ 'ಹಿಂದವಿ' ಎಂದಿದ್ದ ಅಮೀರ ಖುಸ್ರೋನ ಅನಂತರ, ದಕ್ಷಿಣ ಭಾರತದಲ್ಲಿ ಮುಸ್ಲಿಮರ ಪ್ರವೇಶವಾಗಿದೆ. ಈ ಎಲ್ಲ ಭಾಷೆಗಳ ಮಿಶ್ರಣದ ಒಂದು ಹೊಸ ಭಾಷೆ ಅವರ ಕಿವಿಗೆ ಬಿದ್ದಿತು. ಇದನ್ನು 'ದಕ್ಷಿಣೀ' 'ದಖಣೀ' ಎಂದು ಕರೆಯುವುದು ಸ್ವಾಭಾವಿಕವಾಗಿತ್ತು. ಅದರ ಮೊದಲ ಉಲ್ಲೇಖ ಕ್ರಿ. ಶ. ೧೪೩೫ -೧೫೫೫ರ, ಮಧ್ಯದಲ್ಲಿ ಜೀವಿಸಿದ್ದ 'ಕರೇಶೀ ಬೀದರೀ' ಎಂಬ ಬಹಮನಿ ಕವಿಯ ಕಾವ್ಯದಲ್ಲಿ ದೊರೆಯುತ್ತದೆ.

'ಸೋ ಇಸ ಶಾಹಕೆ ದೌರ ಬೀದರ ಮುಕಾಮ
ಯೋ ಶಾಯಿರ ಕಿಯಾ ನಜ್ಮ ದಖನಿ ತಮಾಮ'

ಎಂದು ಪ್ರಪ್ರಥಮವಾಗಿ 'ದಖನೀ' ಎಂಬ ಹೆಸರಿನ ಭಾಷೆಯಲ್ಲಿ ಸಾಹಿತ್ಯ ರಚನೆಯ ಪ್ರಸ್ತಾಪವನ್ನು ಮಾಡಿದ್ದಾನೆ. ಅದೇ ಕಾವ್ಯದ ಮುಂದಿನ ಒಂದು ಪದ್ಯದಲ್ಲಿ,

'ಬರೀದಶಾಹ ಮಹಮುದಕೆ ದೌರ ಭೀ
ಕಯೇ ಹಿಂದು ಈ ಕೋ ಕ್ಯಾ ಕವನ ಫಾರಸೀ'

ಎಂದು 'ಹಿಂದುಈ' ಎಂಬ ಹೆಸರನ್ನೂ ಉಪಯೋಗಿಸಿದ್ದಾನೆ. ಆ ಹೊತ್ತಿಗೆ ಬಹಮನಿ ರಾಜ್ಯದ ಅವನತಿ ಪ್ರಾರಂಭವಾಗಿ ಶಾಹಿ ರಾಜ್ಯಗಳು ಅಸ್ತಿತ್ವದಲ್ಲಿ ಬಂದಿದ್ದುವು. ಬಹಮನಿಗಳ ಸೈನ್ಯದಲ್ಲಿ ರೂಪುಗೊಂಡ ಒಂದು ಭಾಷೆಗೆ ವಿಜಾಪುರದ ಆದಿಲಶಾಹಿಗಳು ಸಾಹಿತ್ಯ ಸ್ವರೂಪವನ್ನು ಕೊಟ್ಟು, ಕೊನೆಗೆ ಅದನ್ನು ತಮ್ಮ ಅಧಿಕೃತ ರಾಜಭಾಷೆಯನ್ನಾಗಿ ಮಾಡಿದವರೂ ವಿಜಾಪುರದ ಅರಸರೆ ಎಂಬುದು ವಿಶೇಷವಾಗಿದೆ. ಅದನ್ನು ಮಾಡಿದವ ಮೊದಲನೆಯ ಇಬ್ರಾಹಿಮ ಆದಿಲಶಹ. ಆತನ ಕಾಲ ಕ್ರಿ. ಶ. ೧೫೩೪–೧೫೫೭. ಈ ಹೊತ್ತಿಗೆ ಹೊಸ ದಖಣೀ ಭಾಷೆ ಪುಷ್ಟಿಗೊಂಡಿತ್ತು ಮತ್ತು ಅದು ಉತ್ತರ ದಕ್ಷಿಣ ಭಾರತಗಳ ಜನ ಸಂಪರ್ಕ ಭಾಷೆಯೂ ಆಗಿತ್ತೆಂದು ಕಾಣುತ್ತದೆ. ಅಂತೆಯೇ ದೆಹಲಿ ನಿವಾಸಿ 'ಖ್ವಾಜಾ ಬಂದೇ ನವಾಜ ಗೇಸೂ ದರಾಜ' ಎಂಬ ಸೂಫಿ ಸಂತ ಧರ್ಮ ಪ್ರಸಾರಕ್ಕೆಂದು ಬಂದು ಕಲಬುರ್ಗಿಯಲ್ಲಿ ನೆಲೆಸಿದ ಮೇಲೆ ಬರೆದ ನಾಲ್ಕೈದು ಪುಟ್ಟ-ಪುಟ್ಟ ಗದ್ಯ ರೂಪದ ಕೃತಿಗಳು, ಈ ಹೊಸ ಭಾಷೆ ದಖಣೆಯಲ್ಲೆ ಇವೆ. ಅವುಗಳೇ ಬಹುಶಃ ದಖಣೆ ಭಾಷೆಯ ಪ್ರಥಮ ಕೃತಿಗಳಾಗಿವೆ. ಅವುಗಳಲ್ಲಿ 'ಮಿಅರಾಜುಲ್ ಆಶಿಕೆ' ತುಸು ದೊಡ್ಡ ಕೃತಿ, ಇನ್ನೊಂದು 'ಶಿಕಾರನಾಮಾ' ಸಣ್ಣ ಕೃತಿ. ಇವೆರಡೂ ಪ್ರಕಟವಾಗಿವೆ. ಉಳಿದ 'ದೂರುಲ್ ಅಸರಾರ್' ಹಾಗೂ 'ತಿಲಾವತುಲ್ ವಜೂದ' ಕೃತಿಗಳು ಪ್ರಕಟವಾದ ವಿವರಗಳು ದೊರೆತಿಲ್ಲ.

ಹೀಗೆ ಸಂಪರ್ಕ ಭಾಷೆಯಾಗಿ ರೂಪುಗೊಂಡ ಒಂದು ಭಾಷೆ ಮುಂದಿನ ದಿನಗಳಲ್ಲಿ ಮೊದ ಮೊದಲು ಸೂಫಿ ಸಂತರಿಂದಲೇ ಅಭಿವೃದ್ಧಿ ಗೊಂಡಿತು. ವಿಜಾಪುರದ ಸೂಫೀ ಸಂತ ಶಾಹ ಮಿರಾಂಜಿ. (ಕ್ರಿ. ಶ. ೧೫೭೩) ದಖಣೆಯಲ್ಲಿ ಒಂದು ಮಹಾಕಾವ್ಯವನ್ನೆ ಬರೆದ. ಅದರ ಹೆಸರು 'ಖುಶ್‌ನಾಮಾ' ಅದಲ್ಲದೆ ಮತ್ತೆ ಕೆಲವು ಕೃತಿಗಳನ್ನೂ ಆತ

ರಚಿಸಿದ್ದಾನೆ. ತನ್ನ ಸಾಹಿತ್ಯದಲ್ಲಿ ತಾನು ಬಳಸಿದ ಭಾಷೆಯನ್ನು 'ಹಿಂದೀ' ಎಂಬುದಾಗಿ ಶಾಹಮಿರಾಂಜಿ ಕರೆದಿದ್ದಾನೆ.

'ಯಹ ಹಿಂದೀ ಬೋಲೂಂ ಸಬ ।
ಇಸ ಅರತೋಂಕೆ ಸಬಬ ।
ಯೋ ದೇಖಿತ ಹಿಂದೀ ಬೋಲ'
ಪನ ಮ ಆನೀ ಹೈ ನಿಪತೋಲ ॥

ವಿಜಾಪುರ ಆಸ್ಥಾನದ ಇನ್ನೊಬ್ಬ ಕವಿ ಅಬ್ದುಲ್ಲಾ ದೇಹಲವಿ (ಕ್ರಿ. ಶ. ೧೬೦೦) ತನ್ನ 'ಇಬ್ರಾಹಿಮ ನಾಮಾ' ಕಾವ್ಯದಲ್ಲಿ

'ಜಬಾಂ ಹಿಂದು ಈ ಮುಂಜ ಸೋಹುಂ ದಿಹಲವೀ
ನ ಜಾನೂ ಅರಬ ಜೌರ ಅಜಬ ಮಸ್ನವೀ ॥ ೯೯॥

ಎಂದು ಹೇಳುತ್ತ ದೆಹಲಿಯವನಾದ ನನಗೆ 'ಹಿಂದು ಈ' ಭಾಷೆ ಬರುತ್ತದೆ. ಅರಬ ಮತ್ತೆಲ್ಲ ಭಾಷೆಗಳ ಕೃತಿಗಳ ಪರಿಚಯ ನನಗಿಲ್ಲ ಎನ್ನುತ್ತಾನೆ. ಆತನ 'ಇಬ್ರಾಹಿಮ ನಾಮಾ' ಅಪ್ಪಟ ದಖಿಣೀ ಭಾಷೆಯ ಸುಂದರ ಕೃತಿ ಎಂದು ವಿದ್ವಾಂಸರಿಂದ ಮನ್ನಣೆ ಪಡೆದಿದೆ.

ಹೀಗೆ ಒಂದು ಹೊಸ ಭಾಷೆಯ ಉದಯವಾಗಿ ಅದಕ್ಕೆ ರಾಜಾಶ್ರಯವೂ ಸಾಹಿತ್ಯಾಶ್ರಯವೂ ದೊರೆತಾಗ, ಪರ್ಶಿಯನ್, ಅರೇಬಿಕ್ ಭಾಷೆಗಳ ಸಾಹಿತಿಗಳಿಗೆ 'ದಿಗಿಲು' ಹಿಡಿಯುವುದು ಸಹಜವಾಗಿತ್ತು. ಅಪ್ಪಟ ಪರ್ಶಿಯನ್ ಭಾಷೆಯಲ್ಲಿ ಬರೆದರೆ, ತನ್ನ ಕೃತಿ ಜನರಿಗೆ ತಿಳಿಯುವುದಿಲ್ಲ. ಭಾರತೀಯ ಭಾಷಗಳಲ್ಲಿಯೇ ಬರೆಯುವುದೆಂದಾದರೆ ಪರ್ಶಿಯನ್ ಭಾಷೆಗೆ ಹಿಂದೇಟು ಎಂಬ ಸಂದರ್ಭದಲ್ಲಿ ತಮ್ಮ ಭಾಷೆ ಹಾಗೂ ಧರ್ಮದ ಗೌರವವನ್ನು ಎತ್ತಿ ಹಿಡಿಯಲು ಇಲ್ಲಿಯ ಕವಿಗಳು ಜನಪ್ರಿಯವಾಗಿದ್ದ ದಖಿಣಿಯಲ್ಲೇ ಕೃತಿಯನ್ನು ರಚಿಸಿರುವುದಾಗಿ ಹೇಳಿಕೊಳ್ಳುತ್ತ, ಅದರಲ್ಲಿ ಭಾರತೀಯ ಭಾಷೆಗಳ ಪ್ರಭಾವವನ್ನು ತುಂಬ ಕಡಿಮೆಯಾಗಿ ಮಾಡಿದ್ದೇನೆಂದು ಹೇಳಿಕೊಳ್ಳುವ ಮಟ್ಟಿಗೆ ಬಂದಿತು. ಇಲ್ಲಿಯ 'ಸನಅತಿ' (ಕ್ರಿ. ಶ. ೧೬೪೫) ಎಂಬ ಕವಿ ತನ್ನ 'ಕಿಸ್ಸಾಯೇ ಬೇನಜೀರ' ಎಂಬ ಕಾವ್ಯದಲ್ಲಿ ಈ ಕುರಿತು ಸ್ಪಷ್ಟವಾಗಿ ಹೇಳುತ್ತಾನೆ:

'ರಖ್ಯಾ ಕಮ ಸಹಂಸ್ಕರ್ತಕೆ ಇಸಮೆ ಬೋಲ ।
ಅದಿಕ ಬೋಲ ನೆ, ತೆ ರಖ್ಯಾ ಹೂಂ ಅಮೋಲ ॥ ೨೨೦ ॥

ಜಿಸೆ ಫಾರಸೀಕಾ ನ ಕುಚ ಗ್ಯಾನ ಹೈ ।
ಸೋ ದಖಿನೀ ಜಬಾಂ ಉನಕೂಂ ಆಸಾನ ಹೈಂ ॥ ೨೨೦ ॥

ಸೋ ಇಸಮೆ ಸಹಂಸ್ಕರ್ತಕಾ ಹೈ ಮುರಾದ ।
ಕಿಯಾ ಇಸತೆ ಆಸಾನಗೀ ಕಾ ಸವಾದ ॥ ೨೨೯ ॥

ಹೀಗೆ 'ಸನಲಿತಿ' ಕವಿ ಸಂಸ್ಕೃತ ಪ್ರಯೋಗವನ್ನು ಕಡಿಮೆ ಮಾಡಿರುವುದಾಗಿ ಪ್ರಕಟಿಸಿದ್ದು ದಖಣಿ ಭಾಷೆಗೆ ಒಂದು ಹೊಸ ಆಯಾಮವಾಯಿತು. ಪರ್ಶಿಯನ್ ಶಬ್ದಗಳ ಬಳಕೆ ಅಧಿಕವಾಗತೊಡಗಿತು. ಇಲ್ಲಿ 'ಉರ್ದು' ಭಾಷೆಯ ಮೂಲ ಬೀಜವನ್ನು ಬಿತ್ತಿದ್ದನ್ನು ಕಾಣಬಹುದಾಗಿದೆ. ಅವನ ಅನಂತರದ ದಿನಗಳಲ್ಲಿ ಬಂದ ವಿಜಾಪುರದವನೇ ಆದ ಮಹಾಕವಿ ನುಸ್ರತಿ (ಕ್ರಿ. ಶ. ೧೬೭೦) ಅದನ್ನು ಪುಷ್ಟವಾಗಿ ಬೆಳೆಸಿದನು. ಇದನ್ನು ಉರ್ದು ಸಾಹಿತ್ಯದ ಪಿತಾಮಹ ಎನಿಸಿದ ಡಾ. ಅಬ್ದುಲ್ ಹಕ್ ಕೂಡ ತಮ್ಮ 'ನುಸ್ರತಿ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅರ್ಥ ಸಂಸ್ಕೃತ ಮತ್ತು ಇತರ ಭಾರತೀಯ ಭಾಷೆಗಳ ಬಳಕೆ ನಿಂತಿತು ಎಂದಲ್ಲ. ಅದು ಕೂಡ ಮುಂದುವರಿಯಿತು. ಹೀಗೆ ಒಂದೇ ಭಾಷೆಯನ್ನು ದೇವನಾಗರಿ ಲಿಪಿಯಲ್ಲಿ ಬಳಸಿದ ಸಂಸ್ಕೃತ ಮತ್ತು ಇತರ ಭಾರತೀಯ ಭಾಷೆಗಳನ್ನೊಳಗೊಂಡ ಭಾಷೆ 'ಹಿಂದಿ' ಎನಿಸಿದರೆ, ಪರ್ಶಿಯನ್ ಲಿಪಿಯಲ್ಲಿ ಪರ್ಶಿಯನ್, ಅರ್‍ಯಾಬಿಕ್ ಭಾಷೆಗಳನ್ನೊಳಗೊಂಡ ಭಾಷೆ 'ದಖಣಿ-ಉರ್ದು' ಎನಿಸಿಕೊಂಡದ್ದು ತೀರ ಇತ್ತೀಚಿನ ದಿನಗಳಲ್ಲಿ

ಪರ್ಶಿಯನ್ ಲಿಪಿಯ ದಕ್ಷಿಣೀ-ದಖಣೀ ಭಾಷೆ ಉತ್ತರ ಭಾರತದಲ್ಲಿ, ಕಾಲಿಟ್ಟಾಗ ಅದಕ್ಕೆ 'ಜಬಾನ-ಇ-ಉರ್ದು-ಮುಅಲ್ಲಾ' ಎಂದು ಕರೆದದ್ದು ಹದಿನೆಂಟನೆಯ ಶತಮಾನದ ಮಧ್ಯದಲ್ಲಿ. 'ಉರ್ದು' ಎಂದರೆ ಸೈನ್ಯ ಅಥವ ದಂಡು; ದಂಡಿನಲ್ಲಿ ಉಪಯೋಗಿಸಿದ ಭಾಷೆ 'ಜಬಾನೆ-ಉರ್ದು-ಮುಅಲ್ಲಾ' ಅನಂತರ (ಕ್ರಿ. ಶ. ಸುಮಾರು ೧೭೮೦ -೧೮೦೦)ರಲ್ಲಿ ಜೀವಿಸಿದ್ದ ದಿಲ್ಲಿಯ ಸಿರಾಜುದ್ದೀನ ಆರಜೂ ಹಾಗೂ ಮಜಹರ್ ಜಾನ್-ಜಾನನ್ ಮೊದಲಾದ ಕವಿ ಸಾಹಿತಿಗಳು 'ಜಬಾನೆ-ಉರ್ದು-ಮುಅಲ್ಲಾ' ಭಾಷೆಯ ಹೆಸರು ಬಹು ದೀರ್ಘವಾಯಿತೆಂದು ಹೆಸರಿನ ಮೊದಲಿನ ಹಾಗೂ ಕೊನೆಯ ಶಬ್ದಗಳನ್ನು ಕತ್ತರಿಸಿ ಕೇವಲ 'ಉರ್ದು' ಶಬ್ದವನ್ನು ಉಳಿಸಿಕೊಂಡರು.

ಈ ಹೊಸ ಭಾಷೆಯ ಹೆಸರಿನ ಅಭಿಮಾನವೂ ಉಲ್ಲೇಖಾರ್ಹವಾಗಿದೆ. ೧೮ ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಸುಪ್ರಸಿದ್ಧ ಕವಿ 'ಮುಹಮ್ಮದ ಬಾಕರ ಆಗಾ' ದಖಣೀ ಭಾಷೆಯ ಅಭಿಮಾನಿಯಾಗಿದ್ದನು. ಆತ ಅದನ್ನು ಕೊನೆಯವರೆಗೂ 'ಹಿಂದೀ' ಎಂದೇ ಕರೆದಿದ್ದಾನೆ. ಅವನ ಖ್ಯಾತ ಶಿಷ್ಯ ಅರ್ಕಾಟದ ನವಾಬನ ಆಸ್ಥಾನದಲ್ಲಿದ್ದ ಅಜೀಜುದ್ದೀನ ನಾಮೀ ಇದನ್ನೇ ಉರ್ದು ಎಂದು ಕರೆದನು. ಇವರಿಬ್ಬರ ಆಶ್ರಯದಾತ ಅರ್ಕಾಟದ ನವಾಬನು ಬಾಕರ ಆಗಾನ ಅಭಿಮಾನಿ. ಅಂದರೆ ಹಿಂದಿಯ ಅಭಿಮಾನಿ. ಆದರೆ ಅಜೀಜುದ್ದೀನನಿಗೆ ಉರ್ದು ಶಬ್ದದ ಮೋಹ. ಗುರು ಹಾಗೂ ಆಶ್ರಯದಾತರಿಬ್ಬರನ್ನೂ ಖುಶಿ ಪಡಿಸಲು ಆತ ತನ್ನ ರಾಜನ ಭಾಷಾ ದೃಷ್ಟಿಕೋನವನ್ನು ಈ ರೀತಿಯಾಗಿ ಪ್ರಕಟಿಸಿದನು.

'ನಜ್ಮಮೆ ಹಿಂದೀಕೆ ಹೈ ಉಸಕೋ ಕಮಾಲ ।
ಹೈ ಯಕೀನ ಉರ್ದು ಜಬಾನಮೆ ಬೇ ಮಿಸಾಲ ॥

ಹೀಗೆ ಒಂದು ಭಾಷೆ ಹಿಂದವಿಯಿಂದ ಹಿಂದಿಯಾಗಿ, ಅದೇ ಭಾಷೆ ದಖಣಿ ಎನಿಸಿ, ದಖಣಿಯಿಂದ ಉರ್ದು ಆದದ್ದು ದಕ್ಷಿಣ ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದ ವಿಜಾಪುರ ಪರಿಸರದಲ್ಲಿ ಎಂಬುದು ಗಮನಾರ್ಹವಾಗಿದೆ.

ವಿಜಾಪುರದ ಮಹಮ್ಮದ ಆದಿಲಶಹನ (ಕ್ರಿ. ಶ. ೧೬೨೬-೧೬೫೬) ಸರದಾರ ಶಹಾಜಿ ಭೋಸಲೆ (ಶಿವಾಜಿಯ ತಂದೆ) ಯ ಆಶ್ರಯದಲ್ಲಿದ್ದ ಜಯರಾಮ ಪಿಂಡೆ ಎಂಬ ಕವಿಯು 'ರಾಧಾ ಮಾಧವ ವಿಲಾಸ' ಎಂಬ ಚಂಪೂ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ತನ್ನ ಕಾವ್ಯದಲ್ಲಿ ಒಂದೆಡೆ ತನಗೆ ಬರುತ್ತಿದ್ದ, ಗೊತ್ತಿದ್ದ ಹನ್ನೆರಡು ಭಾಷೆಗಳನ್ನು ಆತ ಉಲ್ಲೇಖಿಸಿದ್ದಾನೆ.

'ದ್ವಾದಶ ಭಾಷಾಸು ಸಂಸ್ಕೃತ ಪ್ರಾಕೃತ ಗೋಪಾಚಲೀಯ ಗುರ್ಜರ।
ವಕ್ತರ ಢುಂಢಾರ ಪಂಜಾಬ ಹಿಂದುಸ್ತಾನಿ ಬಗ್ಗುಲ।
ಯಾವನೀ ದಾಕ್ಷಿಣಾತ್ಯಯಾವನೀ ಕರ್ನಾಟಕಾಸು।
ನಿರರ್ಗಲಂ ಕವಯಾಮೀತಿ ಜ್ಞಾಪಯಿತು ಮಿತಿ॥

ಈ ಶ್ಲೋಕದಲ್ಲಿ ಬರುವ ಹಿಂದುಸ್ಥಾನ ಯಾವನೀ, ದಾಕ್ಷಿಣಾತ್ಯ ಯಾವನೀ ಭಾಷೆಗಳನ್ನು ಗಮನಿಸಬಹುದು. ಹಿಂದುಸ್ಥಾನ ಬಗ್ಗುಲ ಯಾವನೀ ಎಂಬುದನ್ನು 'ಹಿಂದಿ' ಎಂಬುದಾಗಿಯೂ, ದಾಕ್ಷಿಣಾತ್ಯ ಯಾವನೀ ಎಂಬುದನ್ನು ದಕ್ಷಿಣಿ ಅಥವಾ ದಖಣೀ ಭಾಷೆ ಎಂಬುದಾಗಿ ಉಲ್ಲೇಖಿಸಿದ್ದಾನೆ ಎಂಬುದು ವಿದ್ವಾಂಸರ ಮತವಾಗಿದೆ.

ಕಳೆದ ನಾಲ್ಕು ನೂರು ವರುಷಗಳಲ್ಲಿ ದಖಣಿ ಅಥವಾ ಉರ್ದು ಭಾಷೆಯಲ್ಲಿ ದೊರೆಯುವ ಸಾವಿರಾರು ಕೃತಿಗಳಲ್ಲಿ ಅಧಿಕ ಕೃತಿಗಳು ರಚಿತಗೊಂಡದ್ದು ದಕ್ಷಿಣ ಭಾರತದಲ್ಲಿ. ನೂರಾರು ಸಣ್ಣ ದೊಡ್ಡ ಕವಿಗಳು ಬಾಳಿ ಬದುಕಿದ್ದು ಬೀದರ, ಕಲಬುರ್ಗಿ, ವಿಜಾಪುರ ಹಾಗೂ ಹೈದರಾಬಾದುಗಳ ಪರಿಸರದಲ್ಲಿ.

ದಖಣೀ ಸಾಹಿತ್ಯದ ನಿರ್ಮಾಣದೊಂದಿಗೆ ಹೋಲಿಸಿ ನೋಡಿದರೆ ಈವರೆಗೆ ಪ್ರಕಟವಾದದ್ದು ತೀರ ಕಡಿಮೆ. ಕೆಲವು ಉರ್ದು ಲಿಪಿಯಲ್ಲಿ, ಇನ್ನು ಕೆಲವು ದೇವನಾಗರಿ ಲಿಪಿಯಲ್ಲಿ ಪ್ರಕಟವಾಗಿದ್ದರೂ, ಅಪ್ರಕಟಿತ ಹಸ್ತ ಪ್ರತಿಗಳಲ್ಲೆ ಉಳಿದ ಸಾಹಿತ್ಯ ಅಧಿಕವಾಗಿದೆ. ಅವುಗಳಲ್ಲಿ ವಿಜಾಪುರ ಆಸ್ಥಾನ ಹಾಗೂ ಪರಿಸರದಲ್ಲಿ ನಿರ್ಮಾಣಗೊಂಡ ಕೆಲವು ಕೃತಿಗಳ ಪರಿಚಯವನ್ನು ಮಾಡಿಕೊಡಲು ಮುಂದಿನ ಅಧ್ಯಾಯಗಳಲ್ಲಿ ಪ್ರಯತ್ನಿಸಲಾಗಿದೆ.

ಅಧ್ಯಾಯ ಮೂರು

# ಕನ್ನಡೇತರ ಕೃತಿಗಳು

## ೩.೧ ಚರಿತ್ರ ಗ್ರಂಥಗಳು

### ೩.೧.೧ ತಾರೀಖ–ಇ–ಫರಿಸ್ತಾ

ತಾರೀಖ–ಇ–ಫರಿಸ್ತಾ, ಗುಲ್ಶನ್–ಇ–ಇಬ್ರಾಹಿಮಿ, ನವರಸನಾಮಾ ಎಂಬೆಲ್ಲ ಹೆಸರುಗಳಿಂದ ಕರೆಯಿಸಿಕೊಳ್ಳುವ ಇತಿಹಾಸ ಗ್ರಂಥವನ್ನು ಬರೆದವನು, ಮಹಮ್ಮದ ಕಾಸಿಮ ಹಿಂದುಶಾಹ ಫರಿಶ್ತಾ. ಆತ ಕಾಸ್ಪಿಯನ್ ಸಮುದ್ರದ ದಂಡೆಯ ಅಸ್ತ್ರಾಬಾದದಲ್ಲಿ ಕ್ರಿ. ಶ. ಸುಮಾರು ೧೫೭೦ರಲ್ಲಿ ಹುಟ್ಟಿದನೆಂದು ಹೇಳಲಾಗುತ್ತದೆ. ಆತನ ತಂದೆ ಗುಲಾಮ್ ಅಲಿ ಹಿಂದುಶಾಹನು ಮಗನೊಂದಿಗೆ ತನ್ನ ದೇಶವನ್ನು ಬಿಟ್ಟು ಭಾರತಕ್ಕೆ ಬಂದನು. ಅಹ್ಮದನಗರದ ಮುರ್ತಾದಾ ನಿಜಾಮ ಶಾಹನ ಆಸ್ಥಾನದಲ್ಲಿದ್ದು, ರಾಜಕುಮಾರ ಮೀರಾನ ಹುಸೇನನಿಗೆ ಪಾಠ ಕಲಿಸಹತ್ತಿದನು. ತಾನು ಚಿಕ್ಕವನಿದ್ದಾಗಲೇ ತಂದೆಯನ್ನು ಕಳೆದುಕೊಂಡು ಏಕಾಂಗಿಯಾದ ಫರಿಶ್ತಾ, ಎಳವೆಯಲ್ಲಿಯೇ ನಿಜಾಮನ ಆಸ್ಥಾನದಲ್ಲಿ ಸ್ಥಾನವನ್ನು ಪಡೆದುಕೊಳ್ಳುವಲ್ಲಿ ಸಮರ್ಥನಾದನು. ಆತ ಮುರ್ತಾದಾ ನಿಜಾಮಶಾಹನ ರಹಸ್ಯ ಸಲಹೆಗಾರನಾದನಲ್ಲದೆ, ಗುಪ್ತಚಾರದಳದ ಹಾಗೂ ಅಂಗರಕ್ಷಕರ ಮುಖ್ಯಸ್ಥನೂ ಆದನು.

ರಾಜಕುಮಾರ ಮೀರಾನ್ ಹುಸೇನನ ಕೊಲೆಯಾದ ಅನಂತರ ಫರಿಶ್ತಾ ಅಹ್ಮದನಗರವನ್ನು ಬಿಟ್ಟು ಕ್ರಿ. ಶ. ಸು ೧೫೮೯ರಲ್ಲಿ ವಿಜಾಪುರಕ್ಕೆ ಬಂದನು. ಅದು ಎರಡನೆಯ ಇಬ್ರಾಹಿಮ ಆದಿಲಶಹನ ಕಾಲವಾಗಿತ್ತು. ಬಾದಶಹ ಸಣ್ಣವನಾದುದರಿಂದ ದಿಲಾವರಖಾನನೆಂಬವನು ಆಡಳಿತ ನಡೆಸುತ್ತಿದ್ದನು. ಬಾದಶಹನ ಸರಿಸುಮಾರು ಸಮವಯಸ್ಕನಾಗಿದ್ದ ಫರಿಶ್ತಾನನ್ನು ಆಸ್ಥಾನದಲ್ಲಿಟ್ಟುಕೊಂಡು ಇಬ್ರಾಹಿಮನಿಗೆ ಪರಿಚಯಿಸಿದನು. ಶಾಹದುರ್ಗದ ಯುದ್ಧದಲ್ಲಿ ವಿಜಾಪುರದ ಪರವಾಗಿ ಯುದ್ಧ ಮಾಡಿದನಾದರೂ ಅನಂತರದ ದಿನಗಳಲ್ಲಿ ಅಲ್ಲಿಯೇ ದಿಲಾವರಖಾನನನ್ನು ಆಡಳಿತದಿಂದ ಕಿತ್ತೊಗೆದಾಗ, ಫರಿಶ್ತಾ ಸೇನಾಪತಿ ಜಮಾಲಖಾನನ ಸೆರೆಸಿಕ್ಕು ಅಹ್ಮದನಗರದ ಜೈಲಿನಲ್ಲಿರಬೇಕಾಯಿತು. ತುಸು ದಿನಗಳಲ್ಲಿಯೆ ಅಲ್ಲಿಂದ ಹೇಗೋ ಪಾರಾಗಿ ಮತ್ತೆ ಶಿರಾಜದ ಇನಾಯತಖಾನನ ಮುಖಾಂತರ ಕ್ರಿ. ಶ. ಸು ೧೫೯೩ ರಲ್ಲಿ ಇಬ್ರಾಹಿಮನ ಆಸ್ಥಾನದಲ್ಲಿ ಬಂದನು. ಬಾದಶಹ ಎರಡನೆಯ ಇಬ್ರಾಹಿಮನು ಆತನಿಗೆ 'ರೌದತ್–ಅಲ್–ಸಫಾ' ಎಂಬ ಗ್ರಂಥವನ್ನು ಕೊಟ್ಟು ಭಾರತದಲ್ಲಿಯ ಮುಸ್ಲಿಮರ ಇತಿಹಾಸವನ್ನು ಆವರೆಗೆ ಯಾರೂ ಚೆನ್ನಾಗಿ ಬರೆದಿಲ್ಲವೆಂದು ಹೇಳಿದನು. ನಿಜಾಮುದ್ದೀನನು ಬರೆದಿರುವನಾದರೂ ಅದು ತುಂಬ ಸಂಕ್ಷಿಪ್ತವಾಗಿದೆ. ಅದರಲ್ಲಿ ದಕ್ಷಿಣ ಭಾರತದ ಮುಸ್ಲಿಮರ ಇತಿಹಾಸವು ತಪ್ಪುಗಳಿಂದ ಕೂಡಿದೆ ಎಂದು

ಹೇಳಿದನು. ಆದ್ದರಿಂದ ಭಾರತದಲ್ಲಿ ಮುಸ್ಲಿಮರು ಬಂದು ರಾಜ್ಯ ಸ್ಥಾಪನೆ ಮಾಡಿದ ಪೂರ್ಣ ಚರಿತ್ರೆಯೊಂದಿಗೆ ದಕ್ಷಿಣ. ಭಾರತದ ಮುಸ್ಲಿಮರ ಸವಿವರ ಚರಿತ್ರೆ ಬರಬೇಕಾಗಿದೆ. ಅದನ್ನು ಬರೆಯಲು ಫರಿಶ್ತಾನಿಗೆ ಎರಡನೆಯ ಇಬ್ರಾಹಿಮ ಆದಿಲಶಹನು ಹೇಳಿದನು. ಅವನು ಬರೆಯುವ ಚರಿತ್ರೆಗೆ ಆಧಾರಗಳಿರಬೇಕೆಂದೂ, ನಡೆದ ಘಟನೆಗಳನ್ನು ಯಥಾವತ್ತಾಗಿ ಚಿತ್ರಿಸಬೇಕೆಲ್ಲದೆ ವರ್ಣನೆಗಳಿಂದ, ಅತಿರಂಜಿತಗಳಿಂದ ಮುಕ್ತವಾಗಿರಬೇಕೆಂದು ಆದೇಶಿಸಿದನು. ಅದರಂತೆ ಫರಿಶ್ತಾ ಚರಿತ್ರೆಯನ್ನು ಬರೆಯಲು ಪ್ರಾರಂಭಿಸಿದನು.

ಈ ಮಧ್ಯ ಆತನು ಕ್ರಿ. ಶ. ೧೫೯೪ ರಲ್ಲಿ ಬೇಗಂ ಸುಲ್ತಾನ ಹಾಗೂ ರಾಜಕುಮಾರ ಡ್ಯಾನಿಯಲ್ ಮಿರ್ಜಾನ ನಿಶ್ಚಯಶಾಸ್ತ್ರದಲ್ಲಿ, ಬೇಗಂ ಸುಲ್ತಾನಳನ್ನು ವಿಜಾಪುರದಿಂದ ಅಹ್ಮದನಗರದವರೆಗೆ ಕರೆದುಕೊಂಡು ಹೋಗುವ ಜವಾಬ್ದಾರಿ ಹೊತ್ತನು. ಮುಂಗಿ ಪೈಠಣದಲ್ಲಿ ನಡೆದ ನಿಶ್ಚಯದಲ್ಲೂ ಭಾಗ ವಹಿಸಿದ್ದನು. ಖಾನದೇಶದಲ್ಲಿಯ ಬರ್ಹಾಣಪುರದವರೆಗೂ ಅವಳೊಂದಿಗೆ ಹೋಗಿದ್ದನು. ಕ್ರಿ. ಶ. ೧೬೦೬ರಲ್ಲಿ ಮೊಗಲ ಬಾದಶಹ ಜಹಾಂಗೀರನ ಆಸ್ಥಾನಕ್ಕೂ ಕಾರ್ಯನಿಮಿತ್ತ ವಿಜಾಪುರದ ಪರವಾಗಿ ಹೋಗಿದ್ದನು ಹಾಗೂ ಲಾಹೋರದ ಹತ್ತಿರ ಜಹಾಂಗೀರನನ್ನು ಕಂಡಿದ್ದನು.

ಫರಿಶ್ತಾ ಕ್ರಿ. ಶ. ೧೬೧೨ರವರೆಗೆ ಇತಿಹಾಸವನ್ನು ಬರೆಯಲು ತೊಡಗಿದ್ದರೂ ವಿಜಾಪುರ ಇತಿಹಾಸದ ಘಟನೆಗಳ ಚಿತ್ರಣ ೧೫೯೬ರ ವರೆಗೆ ಮಾತ್ರ ಇದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಅನಂತರದ ಘಟನೆಗಳ ಚಿತ್ರಣ ಅದರಲ್ಲಿ ಇಲ್ಲ. ಫರಿಶ್ತಾನನ್ನು ಇಂಗ್ಲೀಷಿಗೆ ಅನುವಾದ ಮಾಡಿದ ಕ್ಯಾಪ್ಟನ್ ಬ್ರಿಗ್ಸ ಕ್ರಿ. ಶ. ೧೬೧೨ರಲ್ಲಿ ಫರಿಶ್ತಾ ಸತ್ತಿರಬಹುದೆಂದು ಊಹಿಸಿದ್ದಾನೆ ಎಂ. ಜೆ. ಮೊಹಲ್ ಎಂಬ ವಿದ್ವಾಂಸರು ಆತನು ೧೬೨೩ರ ಮೊದಲು ಸತ್ತಿರಲಿಕ್ಕಿಲ್ಲ ಎನ್ನುತ್ತಾರೆ.

ಪ್ರಾರಂಭದಲ್ಲಿ ಫರಿಶ್ತಾನು ತನ್ನ ಗ್ರಂಥಕ್ಕೆ 'ಗುಲ್‌ಶನ್-ಇ-ಇಬ್ರಾಹಿಮಿ' ಎಂದು ಹೆಸರಿಟ್ಟಿದ್ದನು. ಅನಂತರ ಕೆಲವು, ಬದಲಾವಣೆಗಳನ್ನು ಮಾಡಿ ಅದಕ್ಕೆ 'ನವರಸ ನಾಮಾ' ಎಂದನು. ಮೊದಲಿನದು ತನ್ನ ಆಶ್ರಯದಾತ ಎರಡನೆಯ ಇಬ್ರಾಹಿಮನ ಹೆಸರಿನಲ್ಲಿ ಹೇಳಿದ್ದಾದರೆ, ಅನಂತರದ್ದು ಇಬ್ರಾಹಿಮನ ಪ್ರಿಯ ವಿಷಯವಾದ 'ನವರಸ' ಗಳಿಗೆ ಹಾಗೂ ಆತನೇ ಕಟ್ಟಿಸಿದ 'ನವರಸಪುರ'ಕ್ಕೆ ಸಂಬಂಧಿಸಿದ್ದಾಗಿದೆ. ಆದರೆ ಫರಿಶ್ತಾನ ಈ ಕೃತಿಯನ್ನು ವಿಶ್ವದಾದ್ಯಂತ 'ತಾರೀಖ-ಇ-ಫೆರಿಶ್ತಾ' ಎಂದೇ ಗುರುತಿಸಲಾಗುತ್ತದೆ. ತನ್ನ ಗ್ರಂಥದ ಮೊದಲ ಪ್ರತಿಯನ್ನು ಕ್ರಿ. ಶ. ೧೬೦೬ರಲ್ಲಿ ಎರಡನೆಯ ಇಬ್ರಾಹಿಮನಿಗೆ ಸಮರ್ಪಿಸಿದನಾದರೂ, ಸಾಯುವವರೆಗೆ ಗ್ರಂಥವನ್ನು ತಿದ್ದುತ್ತಲೇ ಇದ್ದನೆಂದು ಹೇಳಲಾಗುತ್ತದೆ.

ತಾರೀಖ-ಇ-ಫರಿಶ್ತಾ ಗ್ರಂಥವು ಉಪೋದ್ಘಾತ ಹಾಗೂ ಸಮಾರೋಪಗಳನ್ನಲ್ಲದೆ ೧೨ ಅಧ್ಯಾಯಗಳನ್ನು ಒಳಗೊಂಡಿದೆ. ಭಾರತದಲ್ಲಿಯ ಮುಸ್ಲಿಮರ ಪ್ರಾರಂಭದ ವಿವರಗಳೊಂದಿಗೆ ಪ್ರಾರಂಭವಾಗುವ ಚರಿತ್ರೆಗೆ ಸುಮಾರು ೨೫ ವಿವಿಧ ಇತಿಹಾಸ ಗ್ರಂಥಗಳ ಆಕರಗಳನ್ನು ಬಳಸಿಕೊಂಡಿದ್ದೇನೆಂದು ಫರಿಶ್ತಾನೇ ಹೇಳುತ್ತಾನೆ. ಭಾರತದಲ್ಲಿಯ ಮುಸ್ಲಿಮರ ಸಾಮಾನ್ಯ ಚರಿತ್ರೆಯಾಗಿದ್ದರೂ, ಚಿಕ್ಕ ಪುಟ್ಟ ಸಂಸ್ಥಾನಗಳ ಯಾವ

ವಿವರಗಳನ್ನೂ ಆತನು ಬಿಟ್ಟಿಲ್ಲ. ಅವುಗಳಲ್ಲಿಯ ಕೆಲವಕ್ಕೆ ವಿವರವಾದ ವರ್ಣನೆಯನ್ನು ಮಾಡಿದ್ದಾನೆ.

ಮಧ್ಯಯುಗೀನ ದಕ್ಷಿಣ ಭಾರತದ ಇತಿಹಾಸದ, ಅದರಲ್ಲೂ ವಿಜಾಪುರದ ಆದಿಲಶಹಗಳ (೧೫೯೬ರವರೆಗೆ) ಇತಿಹಾಸದ ವಿದ್ಯಾರ್ಥಿಗಳಿಗೆ ಫರಿಶ್ತಾನ ಗ್ರಂಥವು ಪ್ರಥಮ ಆಕರ ಗ್ರಂಥವಾಗಿದೆ. ವಿಜಾಪುರದಲ್ಲಿ ನಡೆದ ಪ್ರತಿಯೊಂದು ಘಟನೆಗಳನ್ನೂ ಅವನು ದಾಖಲಿಸಿದ್ದಾನೆ. ಯುಸೂಫ ಆದಿಲಶಾಹ, ಇಸ್ಮಾಯಿಲ್, ಮಲ್ಲು, ಮೊದಲ ಇಬ್ರಾಹೀಮ, ಮೊದಲ ಅಲಿ ಹಾಗೂ ಎರಡನೆಯ ಇಬ್ರಾಹೀಮ ಆದಿಲಶಹನ ಕಾಲದಲ್ಲಿಯ ವಿವರವಾದ ತಪಶೀಲನ್ನು ಆತನು ಕೊಟ್ಟಿದ್ದಾನೆ. ವರುಷಗಳನ್ನು ನಮೂದಿಸುವಾಗ ಅಲ್ಲಲ್ಲಿ ತುಸು ಹಿಂದು ಮುಂದಾಗಿರಬಹುದಾಗಿದ್ದರೂ, ವಿಜಾಪುರದ ಇತಿಹಾಸವನ್ನು ಫರಿಶ್ತಾನಷ್ಟು ಖಚಿತವಾಗಿ ಯಾರೂ ಹೇಳಿಲ್ಲ. ಅವನು ವಿಜಾಪುರ ಹಾಗೂ ಅಹ್ಮದನಗರದ ಆಸ್ಥಾನಗಳಲ್ಲಿ ಇದ್ದವನಾದ್ದರಿಂದ, ಮತ್ತು ಮೊಗಲ ಸಾಮ್ರಾಟ ಜಹಾಂಗೀರನನ್ನು ಮುಖತಃ ಕಂಡವನಾದ್ದರಿಂದ, ಕ್ರಿ. ಶ. ೧೫೭೦ ರಿಂದ ೧೬೧೨ರ ವರೆಗಿನ ದಾಖಲಿಸಿದ ಘಟನೆಗಳನ್ನು ಆತ ಕಣ್ಣಾರೆ ಕಂಡವನಾಗಿದ್ದನು.

"ಗ್ರಂಥದ ಭಾಷೆಯ ಬಗ್ಗೆ ಫರಿಶ್ತಾನೇ ಹೇಳಿ ಕೊಂಡಿರುವಂತೆ ಸರಳ ಹಾಗೂ ವರ್ಣನಾ ರಹಿತ ಪರ್ಶಿಯನ್ ಭಾಷೆ ಎಂದಿದ್ದಾನೆ. ಅದು ಪೂರ್ವಗ್ರಹ ದೋಷ ಹಾಗೂ ಪಕ್ಷಪಾತದಿಂದ ಮುಕ್ತವಾಗಿದೆ ಎಂದಿದ್ದಾನೆ. ಆತ ತನ್ನ ಆಶ್ರಯದಾತನನ್ನು ಅತಿರಂಜಿತವಾಗಿ ಬಣ್ಣಿಸಿಲ್ಲ. ಅಲ್ಲದೆ ಆತನ ಕುರಿತಾಗಿ ಬರುವ ಕೆಲವು ಅಸಂತೋಷಕರ ಘಟನೆಗಳನ್ನು ಕೂಡ ಆತ ಬರೆಯದೆ ಬಿಟ್ಟಿಲ್ಲ. ತಾನು ಮುಸ್ಲಿಂನಾಗಿದ್ದರೂ ಇತರ ಮತಗಳ ಕುರಿತು ಹೇಳುವಾಗ ಉಳಿದ ಮುಸ್ಲಿಂ ಇತಿಹಾಸಕಾರರಿಗಿಂತ ಸಂಯಮದಿಂದ ವರ್ತಿಸುತ್ತಾನೆಂದು ಬಹುತೇಕ ವಿದ್ವಾಂಸರು ಗುರುತಿಸಿದ್ದಾರೆ. ತನ್ನ ಹಿಂದಿನವರ ಇತಿಹಾಸ ಗ್ರಂಥಗಳಿಂದ ಘಟನೆಗಳನ್ನು ಹೆಕ್ಕಿ ತೆಗೆವಲ್ಲಿಯೂ ಅಪರೂಪದ ಜಾಣಾಕ್ಷತೆಯನ್ನು ತೋರಿದ್ದಾನೆ. ಪ್ರಮುಖ ಘಟನೆಗಳನ್ನೊಂದನ್ನೂ ಬಿಟ್ಟಿಲ್ಲವೆಂದೂ ಹೇಳಲಾಗುತ್ತದೆ".[೨]

ತಾರೀಖ-ಇ-ಫರಿಶ್ತಾ ಗ್ರಂಥದ ಮೊದಲ ಇಂಗ್ಲಿಷ್ ಅನುವಾದವನ್ನು ಕ್ರಿ. ಶ. ೧೭೬೪ರಲ್ಲಿ ಕ್ಯಾಪ್ಟನ್ ಜೋನಾಥನ್ ಸ್ಕಾಟ ಎಂಬವನು ಮಾಡಿ ಪ್ರಸಿದ್ಧಿಸಿದ್ದನು.[೩] ೧೮೨೬ರಲ್ಲಿ ಜನರಲ್ ಬ್ರಿಗ್ಸ ಎಂಬವನು ಸಂಪೂರ್ಣ ಗ್ರಂಥವನ್ನು ಅನುವಾದಿಸಿ ಎರಡು ಸಂಪುಟಗಳಲ್ಲಿ ಪ್ರಕಟಿಸಿದನು[೪] ಪರ್ಶಿಯನ್ ಬಾರದ ಚರಿತ್ರಕಾರರು ಬ್ರಿಗ್ಸನನ್ನೇ ಅವಲಂಬಿಸುತ್ತಾರೆ.

### ೩.೧.೨ ತಜ್‌ಕಿರಾತ-ಅಲ್-ಮುಲುಕ್

ರಫೀಉದ್ದೀನ್, ಇಬ್ರಾಹಿಮ ಶಿರಾಜಿ ಬರೆದ 'ತಜ್‌ಕಿರಾತ-ಅಲ್-ಮುಲುಕ' ಎಂಬ ಇತಿಹಾಸ ಗ್ರಂಥವು ವಿಜಾಪುರದಲ್ಲಿ ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿಯೇ ಕ್ರಿ. ಶ. ೧೬೦೮-೧೧ರ ಮಧ್ಯ ರಚಿತವಾಯಿತು.

ಮೂಲತಃ ವ್ಯಾಪಾರಿಯಾಗಿ ಭಾರತಕ್ಕೆ ಬಂದ ರಫೀಉದ್ದೀನ ಶಿರಾಜಿ, ೧೫೫೯-೬೦ರಲ್ಲಿ ಮೊದಲು ದೆಹಲಿಗೆ ಬಂದನು. ಅನಂತರ ಸಾಗರಕ್ಕೆ ಬಂದವನು, ಮುಂದೆ ವಿಜಾಪುರದ ಮೊದಲ ಅಲಿ ಆದಿಲಶಹನ ಉಗ್ರಾಣದ ಪಾರುಪತ್ಯಗಾರನಾಗಿ ಕೆಲಸಕ್ಕೆ ಸೇರಿದನು. ಕೆಲವು ಕಾಲ ಬಾದಶಹನ ಆಪ್ತ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದ್ದನು. ಕ್ರಿ. ಶ. ೧೫೬೫ರ ರಕ್ಕಸಗಿ-ತಂಗಡ್ಗಿ ಕಾಳಗದಲ್ಲಿ ಬಾದಶಹನ ಜೊತೆಗೆಯೇ ರಣರಂಗದಲ್ಲಿ ಇದ್ದನು. ಅನಂತರ ಎರಡನೆಯ ಇಬ್ರಾಹಿಮನ ಪ್ರಾರಂಭದ ಕಾಲದಲ್ಲಿ ಅಫಜಲ್‌ಖಾನನೊಂದಿಗೆ ಸೆರೆಮನೆಯಲ್ಲಿದ್ದನು. ಅಲ್ಲಿಂದ ಬಿಡುಗಡೆಯಾಗಿ ೧೫೬೭ರಲ್ಲಿ ಒಂದು ಮುಖ್ಯ ಕಾರ್ಯ ನಿಮಿತ್ತವಾಗಿ ಅಹ್ಮದನಗರಕ್ಕೆ ಕಳುಹಿಸಲ್ಪಟ್ಟನು. ಕೆಲವು ಕಾಲ ವಿಜಾಪುರ ನಗರದ ರಾಜ್ಯಪಾಲನಾಗಿದ್ದನು. ರಾಜಕುಮಾರ ಫತೇಖಾನನ ಪಾರುಪತ್ಯಗಾರ, ನಾಣ್ಯಶಾಲೆಯ ಮುಖ್ಯಸ್ಥನಾಗಿಯೂ ಕೆಲಸವನ್ನು ಮಾಡಿದ್ದನು.

ಅವನ ಗ್ರಂಥದಲ್ಲಿ ಪ್ರಮುಖವಾಗಿ ವಿಜಾಪುರದ ಆದಿಲಶಾಹಿಗಳ ಪ್ರಾರಂಭದ ಇತಿಹಾಸದಿಂದ ಕ್ರಿ. ಶ. ೧೬೧೨ರ ವರೆಗಿನ ವಿವರಗಳು ದಾಖಲೆಗೊಂಡಿವೆ. ಜೊತೆಗೆ ಸಮಕಾಲೀನ ದಕ್ಷಿಣ ಭಾರತ ಹಾಗೂ ಪರ್ಶಿಯಾಗಳ ಚರಿತ್ರೆಯೂ ಬಂದಿದೆ. ಒಂಬತ್ತು ಪರಿಚ್ಛೇದಗಳನ್ನೊಳಗೊಂಡ ಗ್ರಂಥದಲ್ಲಿ ಅನುಬಂಧಗಳನ್ನೂ ಸೇರಿಸಿದ್ದಾನೆ!.

ಮೊದಲನೆಯ ಅಲಿ ಆದಿಲಶಹನ ಕಾಲದಲ್ಲಿ ನಡೆದ ಕ್ರಿ. ಶ. ೧೫೬೫ರ ರಕ್ಕಸಗಿ ತಂಗಡಗಿ ಕಾಳಗದಲ್ಲಿ ಬಾದಶಹನ ಜೊತೆಗೆ ರಣರಂಗದಲ್ಲಿ ಇದ್ದನಾದ್ದರಿಂದ ವಿಜಯನಗರ ಕಾಳಗದ ಕುರಿತಾದ ಅವನ ವಿವರಗಳಿಗೆ ಅಧಿಕ ಮಹತ್ವವಿದೆ. ಜುಬೇರಿಯು 'ಬಸಾತಿನ -ಅಲ್-ಸಲಾತಿನ'ದಲ್ಲಿ ಹಲವಾರು ಬಾರಿ ಈತನ ಹಾಗೂ ಈತನ ಗ್ರಂಥದ ಉಲ್ಲೇಖವನ್ನು ಮಾಡುತ್ತಾನೆ. ಕೆಲವು ಸಲ ಅವನ ಗ್ರಂಥದಲ್ಲಿಯ ವರ್ಣನೆಗಳನ್ನೆ ಯಥಾವತ್ತಾಗಿ ಕೊಟ್ಟಿದ್ದಾನೆ. ಪೂರ್ತಿ ಗ್ರಂಥದ ಪ್ರಕಟನೆ ಆದ ಉಲ್ಲೇಖಗಳಿಲ್ಲ. ಅದರ ಅನುವಾದವೂ ಆದಂತೆ ಕಂಡು ಬರುವುದಿಲ್ಲ. ೧೬೨೦-೨೫ರ ಸುಮಾರಿನಲ್ಲಿ 'ನಾತು' ಎಂಬವರು ಇಂಗ್ಲೀಷಿನಲ್ಲಿ ಪರಿಚಯಾತ್ಮಕ ಪುಟ್ಟ ಪುಸ್ತಕವನ್ನು ಬರೆದಿದ್ದಾರೆಂದು ಹೇಳಲಾಗುತ್ತದೆ.

ಮಾದರಿಗಾಗಿ 'ಬಸಾತಿನ-ಅಲ್-ಸಲಾತಿನ' ಇತಿಹಾಸ ಗ್ರಂಥದಲ್ಲಿ ಉದ್ಧರಿಸಿದ ಒಂದು ಪ್ರಸಂಗದ ಕನ್ನಡ ಅನುವಾದವನ್ನು ನೋಡಬಹುದು.

> "ರಫೀಉದ್ದೀನ ಶಿರಾಜಿಯು ಆ ಪ್ರಕರಣದಲ್ಲಿ (ರಕ್ಕಸಗಿ ತಂಗಡಗಿ ಕಾಳಗದಲ್ಲಿ) ಇದ್ದನಾದ್ದರಿಂದ ಆತನು ಕೂಡ ತನ್ನ ಅನುಭವಗಳನ್ನು ಹೀಗೆ ಹೇಳಿದ್ದಾನೆ. 'ನನಗೂ ಕೂಡ ಇಂಥ ಪ್ರಸಂಗ ಬಂದಿತ್ತು. ಒಂದು ದಿನ ವಿಜಯನಗರದವರು ಗುಹೆಗಳಿಂದ ಹೊರಬಿದ್ದರು. ಅವರಲ್ಲಿಯ ಒಂದಿಬ್ಬರನ್ನು ನಾನು ಹಿಡಿದೆನು. ಅವರಿಗೆ ತುಂಬ ಹಿಂಸೆ ಮಾಡಿದ ಅನಂತರ ಅವರು ಹೀಗೆ ಹೇಳಿದರು. ಇಂಥ ಪರ್ವತ ಪ್ರದೇಶದಲ್ಲಿಯ ಒಂದು ಗುಹೆಯಲ್ಲಿ ನಮ್ಮ ಹೆಂಡಿರು ಮಕ್ಕಳಿದ್ದಾರೆ. ಜೊತೆಗೆ ನಮ್ಮ ಸಂಪತ್ತು ಅಲ್ಲಿಯೇ ಇದೆ ಎಂದರು. ನಮ್ಮನ್ನು ಜೀವ ಸಹಿತವಾಗಿ ಅಲ್ಲಿಗೆ ತೆಗೆದುಕೊಂಡು ಹೋದರೆ, ನಿಮಗೆ ಸಾಕಷ್ಟು ದ್ರವ್ಯವನ್ನು ಕೊಡುತ್ತೇವೆ ಎಂದರು. ಎಲ್ಲ ಮನುಷ್ಯರಿಗೂ ಆಶೆ ಬಿಟ್ಟದ್ದಲ್ಲ.

ನಾವು ಕೆಲವರನ್ನು ಸೇರಿಸಿ ಅವರೊಂದಿಗೆ ಗುಹೆಯಲ್ಲಿ ಹೊರಟೆವು. ತುಸು ಮಾರ್ಗ ಕ್ರಮಿಸಿದ ಅನಂತರ ಆ ಗುಹೆಗಳಲ್ಲಿ ತುಂಬ ಇಕ್ಕಟ್ಟಾದ ಬಹಳ ಮಾರ್ಗಗಳು ಕಂಡುವು. ಒಂದೊಂದು ಬೇರೆ ಬೇರೆ ದಿಕ್ಕುಗಳಿಗೆ ಹೋಗುತ್ತಿದ್ದುವು. ಅದನ್ನು ಕಂಡು ನಮಗೆ ಚಿಂತೆಯಾಯಿತು. ಯಾರಿಗೆ ಗೊತ್ತು? ತಿರುಗಿ ಬರುವಾಗ ನಮಗೆ ದಾರಿ ಸಿಗದಿದ್ದರೆ? ದಾರಿ ತಪ್ಪಲಿ ಅಥವ ಆ ಚಿಂತೆಯಲ್ಲಿ ಗಾಬರಿಯಾಗಿ ಬಿಟ್ಟರೆ? ಇಲ್ಲವೆ ಈ ಮನುಷ್ಯರ ಕೈಯಲ್ಲಿ ಸೆರೆ ಸಿಕ್ಕರೆ? ಅಥವಾ ಅವರು ನಮ್ಮನ್ನು ಕೊಂದು ಬಿಟ್ಟರೆ? ಎಂಬ ವಿಚಾರಗಳಿಂದ ಎಚ್ಚತ್ತು ಕೆಲವು ಇಜ್ಜಲು ತುಂಡುಗಳನ್ನು ಹಾಗೂ ಬೆಳಕಿಗಾಗಿ ಎರಡು ಮೂರು ಹಿಲಾಲು ದೀಪಗಳನ್ನು ತೆಗೆದುಕೊಂಡೇ ಹೊರಟೆವು. ಒಂದೊಂದು ಗುಹೆಗಳನ್ನು ದಾಟುತ್ತಿದ್ದಂತೆ ಆ ಬಂಡೆಗಲ್ಲುಗಳ ಮೇಲೆ ಇಜ್ಜಲು ತುಂಡಿನಿಂದ ಗೀರು ಹಾಕಿ ಗುರುತು ಮಾಡುತ್ತಿದ್ದೆವು. ಯಾಕೆಂದರೆ ತಿರುಗಿ ಬರುವಾಗ ಈ ಗುರುತುಗಳಿಂದ ಹೊರಗೆ ಬರಲು ಸಾಧ್ಯ ಹಾಗೂ ದಾರಿ ತಪ್ಪಲಾರದು. ಆಗ ಮುಂದೆ ಮುಂದೆ ಹೋದಂತೆ ಹಲವಾರು ಕಡೆಗೆ ದಟ್ಟವಾದ ಕತ್ತಲೆ ಆವರಿಸಿದ್ದು ಕಂಡು ಬಂದಿತು. ಇನ್ನು ಕೆಲವು ಕಡೆಗೆ ನೆತ್ತಿಯ ಮೇಲೆ ಚಿಕ್ಕ ರಂಧ್ರಗಳಿಂದ ಬೆಳಕು ಬಿದ್ದುದು ಕಾಣುತ್ತಿತ್ತು. ಆ ರಂಧ್ರಗಳಿಂದ ಕೆಲವು ಕಡೆಗೆ ಆಕಾಶವೂ ಕಾಣುತ್ತಿತ್ತು. ಸ್ವಚ್ಛವಾದ ಪ್ರಕಾಶವು ಬಿದ್ದಿರುತ್ತಿತ್ತು. ಆಗ ತುಂಬ ಸಂತೋಷದಿಂದ ದಾರಿಯನ್ನು ಸವೆಸುತ್ತಿದ್ದೆವು. ಹೀಗೆ ಸುಮಾರು ಒಂದು ಒಂದೂ ಕಾಲು ಕೋಸು ಮಾರ್ಗವನ್ನು ಆ ಭಯಂಕರವಾದ ಗುಹೆಗಳಲ್ಲಿ ಹೋದೆವು. ಒಂದು ಸ್ಥಳದಲ್ಲಿ ಹೋಗಿ ಮುಟ್ಟದಾಗ ಆ ಗುಹೆಯಲ್ಲಿ ಒಳಗೆ ಸೇರಲಾರದಷ್ಟು ಚಿಕ್ಕ ಗುಹೆಯಾಗಿತ್ತು. ಆ ಗುಹೆಯಲ್ಲಿ ನಾಲ್ಕು ಗಜಗಳಷ್ಟು ದಾರಿಯನ್ನು ಕುಳಿತು ಹೊಟ್ಟೆ ಸವರಿ ಹೋಗಬೇಕಾಗುತ್ತಿತ್ತು. ಆ ಇಬ್ಬರು ಕೈದಿಗಳ ಕಾಲಿಗೆ ಹಗ್ಗ ಕಟ್ಟಿ ಅವರಿಗೆ ಮುಖವಾಡಗಳನ್ನು ಹಾಕಿದ್ದೆವು. ಅವರು ಆ ಚಿಕ್ಕ ಗುಹೆಯಲ್ಲಿ ಒಳಗೆ ಹೋಗಿಬಿಟ್ಟರು. ನಾವು ಕೂಡ ಅವರ ಬೆನ್ನ ಹಿಂದೆಯೇ ಹೊರಟು ಬಿಡೋಣವೆಂದು ಮನದಲ್ಲಿಯೆ ವಿಚಾರಿಸಿದೆವು. ಆದರೆ ಒಳಗಿನಿಂದ ದೊಡ್ಡ ಗದ್ದಲ ಕೇಳಿಸಹತ್ತಿತ್ತು. ಬಹಳ ಜನರ ಗದ್ದಲವಾಗಿತ್ತು. ಶಸ್ತ್ರಗಳ ಖಡಖಡಾಟವೂ ಕೇಳಬರಹತ್ತಿತ್ತು. ಆ ಇಬ್ಬರು ಕೈದಿಗಳ ಕಾಲಿಗೆ ಕಟ್ಟಿದ ಹಗ್ಗವನ್ನೂ ಅವರು ಒಳಗಿಂದೊಳಗೆ ಹರಿದುಬಿಟ್ಟಿದ್ದರು. ಅವರಿಬ್ಬರೂ ಒಳಗೆ ಹೋಗಹೋಗುತ್ತಿದ್ದಂತೆ ಗಲಭೆ ಇನ್ನಷ್ಟು ಅಧಿಕವಾಯಿತು. ಆದರಿಂದಾಗಿ ಒಳಗೆ ಸಾಕಷ್ಟು ಜನರು ಇರಬಹುದೆಂದು ನಮಗೆ ತಿಳಿಯಿತು. ಹಾಗೂ ನಾವು ಭಯಭೀತರಾದೆವು. ಒಂದು ವೇಳೆ ನಾವು ಈ ಗುಹೆಯಲ್ಲಿ ತುಸುವೆ ಮುಂದೆ ಹೋದರೂ ಕೂಡ ಅವರೆಲ್ಲರೂ ನಮ್ಮ ಮೇಲೆ ತಿರುಗಿ ಬಿದ್ದು ಆಕ್ರಮಣ ಮಾಡಿ ನಮ್ಮನ್ನು ಹಿಡಿಯುತ್ತಾರೆ. ಹಿಂಸೆ ಮಾಡುತ್ತಾರೆ. ನಮ್ಮನ್ನು ಬಂದಿಗಳನ್ನಾಗಿ ಮಾಡಬಹುದು ಇಲ್ಲವೆ ನಮ್ಮನ್ನು ಕೊಂದೇ ಬಿಡಬಹುದು. ತುಸು ದ್ರವ್ಯಕ್ಕಾಗಿ ನಾವು ಜೀವವನ್ನೆ ಕೊಡಬೇಕಾದೀತು ಎಂಬೆಲ್ಲ ವಿಚಾರಗಳಿಂದ ನಾವು ನಿರುಪಾಯರಾಗಿ, ನಿರಾಶರಾಗಿ"* ಅಲ್ಲಿಂದ ತಿರುಗಿ ಹೊರಟೆವು.

ಹೀಗೆ ವರ್ಣನೆ ಸಾಗುತ್ತದೆ. ಇನ್ನೊಂದೆಡೆ 'ರಾಮರಾಯನ ಮಗ ಯುದ್ಧವಲ್ಲಿ ಹೇಗೋ ಬದುಕಿ ಉಳಿದು ಈ ಗುಹೆಗಳಲ್ಲೊಂದರಲ್ಲಿ ವಾಸಿಸುತ್ತಿದ್ದನು. ಆ ಗುಹೆ ಕೋಟೆಯಿಂದ ಸುಮಾರು ಏಳೆಂಟು ಕೋಸು ದೂರವಿದ್ದು ಅದು ಪ್ರಸಿದ್ಧವೂ ಆಗಿದೆ. ಆ ಗುಹೆಯಲ್ಲಿ ತನ್ನ ಪರಿವಾರದೊಂದಿಗೆ ಜೀವಿಸುತ್ತಿದ್ದನಂತೆ. ಅನಂತರ ಮೂರು

ವರುಷಗಳಾದ ಮೇಲೆ ಒಂದು ದಿನ ಗುಹೆಯಿಂದ ಹೊರಬಿದ್ದು ಆದಿಲಶಾಹಿ ಕಡೆಯಿಂದ ಇದ್ದ ಗುಮಾಸ್ತನನ್ನು ಹೊರಗೆ ಹಾಕಿದನು. ರಫಿಯುದ್ದೀನ ಶಿರಾಜಿಯ ಅಭಿಪ್ರಾಯದಲ್ಲಿ ರಾಮರಾಜನ ಮಗನು ಹಿಜರಿಶಕ ೧೦೧೭ರ ವರೆಗೆ (ಕ್ರಿ.ಶ. ೧೬೦೮-೯) ತನ್ನ ಕುಟುಂಬದೊಂದಿಗೆ ಇಲ್ಲಿಯೇ ಇದ್ದನು.[೬]

ಹೀಗೆ ರಫೀಯುದ್ದೀನ ಶಿರಾಜಿಯು ವಿಜಯನಗರದ ಯುದ್ಧದ ಕುರಿತು ಪ್ರತ್ಯಕ್ಷ ವರದಿಯನ್ನು ಮಾಡಿದ್ದನ್ನು ಕಾಣುತ್ತೇವೆ.[೭]

### ೩.೧.೩. ಮುಹಮ್ಮದ ನಾಮಾ

ಮಹಮ್ಮದ ಆದಿಲಶಹ (ಕ್ರಿ. ಶ. ೧೬೨೬ – ೧೬೫೬)ನ ಆಸ್ಥಾನದಲ್ಲಿದ್ದ ಮುಹಮ್ಮದ ಜುಹೂರನು 'ಮುಹಮ್ಮದ ನಾಮಾ' ಎಂಬ ಇತಿಹಾಸವನ್ನು ಬರೆದನು. ಆತ ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಕವಿ ಮುಲ್ಲಾ ಜುಹೂರಿಯ ಮಗ. ಮಹಮ್ಮದ ಆದಿಲಶಹನು ರಫೀಯುದ್ದೀನ ಶಿರಾಜಿ ಬರೆದ 'ತಜ್‌ಕಿರಾತ್-ಅಲ್ -ಮುಲುಕ' ಎಂಬ ಇತಿಹಾಸದ ಗ್ರಂಥವನ್ನು ಕ್ರಿ. ಶ. ೧೬೪೧ ರಲ್ಲಿ ಒಂದು ದಿನ ಮುಹಮ್ಮದ ಜುಹೂರನಿಗೆ ಕೊಟ್ಟು ಇಂಥದೊಂದು ಇತಿಹಾಸವನ್ನು ವಿಶೇಷವಾಗಿ ದಕ್ಷಿಣ ಭಾರತದಲ್ಲಿಯ ತನ್ನ ರಾಜ್ಯದ ವಿಸ್ತಾರಗಳನ್ನು, ವಿವರಗಳನ್ನು ಬರೆಯಲು ಹೇಳಿದನಂತೆ. ಅದು ತುಂಬ ಪಾಂಡಿತ್ಯ ಪೂರ್ಣವಾಗಿಯೂ ಸುಂದರವಾದ ಶೈಲಿಯಲ್ಲಿಯೂ ಇರಬೇಕೆಂದು ಆದೇಶಿಸಿದನಂತೆ. ಅದರಂತೆ ಮಹಮ್ಮದ ಜುಹೂರನು ಮಹಮ್ಮದ ಆದಿಲಶಹನ ೩೦ ವರುಷಗಳ ಆಡಳಿತದ ವಿವರಗಳನ್ನು ತುಂಬ ಪರಿಶ್ರಮ ಪಟ್ಟು ಬರೆದಿದ್ದಾನೆ. ಆದ್ದರಿಂದಲೇ 'ಮುಹಮ್ಮದ ನಾಮಾ' ಮಹಮ್ಮದ ಆದಿಲಶಹನ ಆಡಳಿತದ ಅಧಿಕೃತ ದಾಖಲೆಯಾಗಿ ಉಳಿದಿದೆ. ಅದು ಒಂದು ಸುಂದರ ಕಾವ್ಯವೂ ಆಗಿದೆ. ಗ್ರಂಥದಲ್ಲಿ ಯುದ್ಧಗಳು, ಯಾತ್ರೆಗಳು, ಮದುವೆಯ ಸಂದರ್ಭಗಳು ಸುಂದರವಾಗಿ ವರ್ಣಿತವಾಗಿವೆ. ಅದರಲ್ಲಿ ಸಾಮಾಜಿಕ ಸಮಾರಂಭಗಳು ಮದುವೆಗಳು, ವಾರ್ಷಿಕ ಹಜ್‌ಯಾತ್ರೆಗಳು ಮತ್ತು ಕೆಲವು ಪ್ರಮುಖ ಕಟ್ಟಡಗಳನ್ನು ಕಟ್ಟಿದ ವರುಷಗಳ ಉಲ್ಲೇಖವೂ ಇದೆ. ಹೀಗಾಗಿ ಅಂದಿನ ಸಾಮಾಜಿಕ ಪರಿಸರವನ್ನು ಅಭ್ಯಸಿಸಲು ಇದು ಒಂದು ಒಳ್ಳೆಯ ಆಕರ ಗ್ರಂಥವಾಗಿ ಉಳಿದಿದೆ.

ವಿಜಾಪುರದ ಆದಿಲಶಾಹಿಗಳು ಅಂದಿನ ಮಲೆನಾಡು ಹಾಗೂ ಕರ್ನಾಟಕದಲ್ಲಿ ನಡೆಸಿದ ಜೈತ್ರಯಾತ್ರೆಗಳ ವಿವರಗಳು 'ಮಹಮ್ಮದ ನಾಮಾ' ದಲ್ಲಿ ಬಂದಷ್ಟು ಇನ್ನಾವ ಗ್ರಂಥಗಳಲ್ಲೂ ಬಂದಿಲ್ಲವೆಂಬುದು ವಿದ್ವಾಂಸರ ಮತ. ಮಹಮ್ಮದ ಆದಿಲಶಹನು ಕರ್ನಾಟಕ ಹಾಗೂ ಮಲೆನಾಡುಗಳನ್ನು ಗೆದ್ದ ಬಗ್ಗೆ ಅದೊಂದೆ ಅಧಿಕೃತ ಆಧಾರಗ್ರಂಥವಾಗಿದೆ. ಈ ಗ್ರಂಥದ ಭಾಗಶಃ ಅನುವಾದವನ್ನು ಪ್ರೊ. ಭಾಗವತದಯಾಳ ವರ್ಮಾ ಅವರು ಇಂಗ್ಲೀಷನಲ್ಲಿ ಮಾಡಿದ್ದಾರೆ. ಅದು ೧೯೩೦ರಲ್ಲಿ ಎನ್. ಸಿ. ಕೇಳಕರ ಅವರು ಸಂಪಾದಿಸಿದ, ಪುಣೆಯ ಭಾರತ ಇತಿಹಾಸ ಸಂಶೋಧಕ ಮಂಡಳದವರು ಪ್ರಕಟಿಸಿದ, 'ಶಿವಾಜಿ ನಿಬಂಧಾವಲಿ'ಯ ಎರಡನೆಯ ಸಂಪುಟದಲ್ಲಿ ಪ್ರಕಟವಾಗಿದೆ.

ಮಾದರಿಗಾಗಿ 'ಮಹಮ್ಮದ ನಾಮಾ'ದಲ್ಲಿಯ ಕೆಲವು ವಿವರಗಳನ್ನು ನೋಡಬಹುದು. ಇಲ್ಲಿಯ ಭಾಗಗಳು ಗಣೇಶ ಹರಿ ಖರೇ ಅವರು ಸಂಪಾದಿಸಿದ 'ಶಿವಚರಿತ್ರ ವೃತ್ತ ಸಂಗ್ರಹ'ದ ಎರಡನೆಯ ಖಂಡ, ಫಾರ್ಸಿ ವಿಭಾಗದಿಂದ ಆಯ್ದುಕೊಳ್ಳಲಾಗಿದೆ. ಗ್ರಂಥದ ಪ್ರಾರಂಭದಲ್ಲಿ ಮುಹಮ್ಮದ ಜುಹೂರಿಯು ತಾನು ಗ್ರಂಥ ಬರೆಯುವ ಅವಶ್ಯಕತೆಯನ್ನು ಹೀಗೆ ಹೇಳುತ್ತಾನೆ.

"ನಾನು ದಕ್ಷಿಣದ ಬಾದಶಹರು ಸಂಪೂರ್ಣ ಕರ್ನಾಟಕವನ್ನು ತಮ್ಮ ಸ್ವಾಧೀನ ಪಡಿಸಿಕೊಂಡುದರ ಇತಿಹಾಸವನ್ನು ಬರೆಯುತ್ತಿದ್ದೇನೆ. ಅದು ಹೀಗಿದೆ. ದೇವರ ಇಚ್ಛೆಯ ಅನುಸಾರವಾಗಿ ಮುಹಮ್ಮದ ಆದಿಲಶಹನು ಶಾಹ ಸನ್ ೧೧೦೦ ರಲ್ಲಿ (ಕ್ರಿ. ಶ. ೧೬೨೬) ಸಿಂಹಾಸನವನ್ನೇರಿದನು. ಅನಂತರ ಬಾದಶಹನು, ನವಾಬ ಮುಸ್ತಫಾಖಾನ ಊರ್ಫ ಖಾನ ಬಾಬಾನಿಗೆ ಹೀಗೆ ಆದೇಶಿಸಿದನು. 'ನನ್ನ ಕಾಲ ಕಿರ್ದಿಯ ಇತಿಹಾಸವನ್ನು ಬರೆಯಬೇಕು. ಅದಕ್ಕೆ ಜುಹೂರನೇ ಯೋಗ್ಯ ವ್ಯಕ್ತಿಯಾಗಿದ್ದಾನೆ.' ಆಗ ನವಾಬನು ತನ್ನ ಮನೆಗೆ ಕರೆಸಿ ನನಗೆ 'ಮುಹಮ್ಮದ ನಾಮಾ' ಬರೆಯಲು ಹೇಳಿದನು.

ಮಹಮ್ಮದ ಆದಿಲಶಹನು ಯಕ್ಷಂಬಾ ಜಿಲ್ಹಾದ ಹಿಜರಿಸನ್ ೧೦೨೭ರಲ್ಲಿ ನವರಸಪುರದಲ್ಲಿ ತಾಜ ಸುಲ್ತಾನ ಸಾಹಿಬಳ ಹೊಟ್ಟೆಯಲ್ಲಿ ಹುಟ್ಟಿದನು. ಅವನು ಕಿಶ್ವರಜಾನ್ ಉರುಫ್ ಜೀಜೀಮಾ ಎಂಬ ದಾಸಿ ಹಾಗೂ ಬಡೀ ಸಾಹೇಬಳ ನಜರಿನಲ್ಲಿ ಬೆಳೆದನು. ಸುಹೂರ ಸನ್ ೧೦೬೦ರಲ್ಲಿಯ ಮೊಹರಮದಲ್ಲಿಯ ಬುಧವಾರ ಮಧ್ಯಾಹ್ನ ಎರಡು ಗಂಟೆಗೆ ಮಹಮ್ಮದಪುರದಲ್ಲಿ ಸಿಂಹಾಸನದ ಮೇಲೆ ಕುಳಿತನು.

ರಾಜನ ಮದುವೆಯ ತಾ ೧೮ ರಜಬ್ ದಿನ ಆಯಿತು. ಮದುವೆಯ ಸಮಾರಂಭವು ೪೦ ದಿನಗಳವರೆಗೆ ನಡೆಯಿತು. ಗೋವಳಕೊಂಡದ ಕುತುಬಶಾಹನು ಪ್ರತಿವರುಷ ಕೊಡಬೇಕಾಗಿದ್ದ ಖಂಡಣೆಯನ್ನು ಕಳಿಸಿರಲಿಲ್ಲ. ಆ ಕುರಿತು ಅವನ ಹತ್ತಿರ ಸಚಿವನೊಬ್ಬನನ್ನು ಕಳಿಸಲಾಗಿತ್ತು. ಆಗ ಅವನು ಒಂದು ಲಕ್ಷ ಐವತ್ತು ಸಾವಿರ ಹೊನ್ನನ್ನು ಕಳಿಸಿದನು. ಹಿಜರಿಸನ್ ೧೦೪೨ ರ ಪ್ರಾರಂಭದಲ್ಲಿ ಬಾದಶಹನು ಜೋರಾಪುರದಲ್ಲಿ ತನ್ನ ಎಲ್ಲ ಸೈನ್ಯ ಹಾಗೂ ಅಧಿಕಾರಿಗಳನ್ನು ಸೇರಿಸಿ. ಪೈಗಂಬರವಾಸಿಗಳಾದ ಬಾದಶಹನ (ಎರಡನೆಯ ಇಬ್ರಾಹಿಮನ) ಪ್ರತ್ಯರ್ಥವಾಗಿ ಪ್ರಾರ್ಥನೆಯನ್ನು ಮಾಡಬೇಕೆಂದು ಆಜ್ಞೆ ಮಾಡಿದನು. ಹಿಜರಿಸನ್ ೧೦೪೨ ಮೊಹರಮ್ ೫ ರಂದು ಆತನ ಸೈನ್ಯ ಹಿಂತಿರುಗಿತು.

ಪರಿಂಡಾ ಕೋಟೆ ಹಸ್ತಗತ ಹಿಜರಿಸನ್ ೧೦೪೨ರ ಮೋಹರಮ್ ೧೦ ರಂದು ಆಕಾ ರಿಜ್ವಾನ್ ಉರುಫ್ ಹೈಬತಖಾನನು ಪರಿಂಡಾ ಕಿಲ್ಲೆಯ ಹವಾಲ್ದಾರನಾಗಿದ್ದವನು, ತನ್ನ ಒಡೆಯ ನಿಜಾಮಶಾಹನ ವಿರುದ್ಧ ಬಂಡೆದ್ದು ವಿಜಾಪುರಕ್ಕೆ ಪತ್ರ ಕಳಿಸಿದನು. 'ನಾನು ಈ ಕಿಲ್ಲೆಯನ್ನು ಆದಿಲಶಾಹನಿಗೆ ಕಾಣಿಕೆಯಾಗಿ ಕೊಡುತ್ತೇನೆ. ಅದನ್ನು ತೆಗೆದುಕೊಳ್ಳಲು ಯಾರನ್ನಾದರೂ ಕಳಿಸಬೇಕು' ಎಂದು ಬರೆದಿದ್ದನು. ಅದರಂತೆ ಮುರಾರಪಂತನ ಮುಖಾಂತರ ಆಕಾ ರಿಜ್ವಾನನಿಗೆ ಹತ್ತು ಸಾವಿರ ಹೊನ್ನುಗಳನ್ನು ಬಹುಮಾನವಾಗಿ ಕೊಟ್ಟನು ಹಾಗೂ ಆಕಾ ರಿಜ್ವಾನನು ಪರಿಂಡಾ ಕಿಲ್ಲೆಯ ಕೀಲಿಕೈಯನ್ನು ಮುರಾರ ಪಂತನಿಗೆ ಕೊಟ್ಟನು.

### ಮಾಲಿಕ–ಇ–ಮೈದಾನ ತೋಫನ್ನು ವಿಜಾಪುರಕ್ಕೆ ತಂದದ್ದು

ಹಿಜರಿಸನ್ ೧೦೪೨ರಲ್ಲಿ (ಕ್ರಿ. ಶ. ೧೬೩೨–೩೩) ಮುರಾರ ಪಂತನು (ಮುರಾರಿ ಜಗದೇವ ಪ್ರಧಾನ ಸಚಿವ) 'ಮಾಲಿಕ–ಇ–ಮೈದಾನ' ಎಂಬ ಹೆಸರಿನ ಪ್ರಚಂಡ ತೋಫನ್ನು ಪರಾಂಡಾದಿಂದ ವಿಜಾಪುರಕ್ಕೆ ತರಲು ಮಳೆಗಾಲದಲ್ಲಿ ಪ್ರಯತ್ನಿಸಿದನು. ದಾರಿಯಲ್ಲಿ ಭೀಮಾ ನದಿಯನ್ನು ದಾಟುವಾಗ ತೋಫನ್ನು ನಾವೆಯಲ್ಲಿ ಇಟ್ಟಿತ್ತಾದರೂ, ಅದರ ಭಾರದಿಂದಾಗಿ ಅದು ನದಿಯಲ್ಲಿ ಮುಳುಗಿತು. ಅನಂತರ ಬಹಳ ಕಷ್ಟ ಪಟ್ಟು ಅದನ್ನು ನೀರಿನಲ್ಲಿಂದ ಎತ್ತಿ ಹಿಜರಿಸನ್ ೧೦೪೨ರ ಸಫರ ೧೫ರ ಮಿತಿಯಂದು ವಿಜಾಪುರಕ್ಕೆ ತಂದು ಎತ್ತರವಾದ ಒಂದು ಬುರುಜ (ಗೋಪುರ)ನ್ನು ಕಟ್ಟಿಸಿ ಅದರ ಮೇಲೆ ಇಡಲಾಯಿತು. ದಿನಾಂಕ ೨೨–೬–೧೬೩೨

### ಬಾದಶಹನ ಮತ್ತೊಂದು ಮದುವೆಯ ಸುದ್ದಿ

ಮಹಮ್ಮದ ಆದಿಲಶಹನ ಮದುವೆಯು ಆತನ ಸೋದರಮಾವನ ತಮ್ಮ ರಹಮಾನುಲ್ ಹುಸೇನಿಯ ಮಗಳು ತಾಜುಲ್ ಮುಖದ್ದಿರಾತಳೊಂದಿಗೆ ಆಯಿತು. ಮಹಮ್ಮದಶಾಹನು ಗೋವಳಕೊಂಡದ ಸುಲ್ತಾನ ಅಬ್ದುಲ್ಲಾ ಕುತುಬಶಾಹನ ತಂಗಿಯನ್ನು ತನಗೆ ಕೊಟ್ಟು ಮದುವೆ ಮಾಡಿಕೊಡಲು ಹೇಳಿದನು. ಮೊದಲು ಆತನು ನಿರಾಕರಿಸಿದನು. ಅನಂತರ ಯುದ್ಧದ ಬೆದರಿಕೆಯನ್ನು ಹಾಕಲು ತಂಗಿಯನ್ನು ಕೊಡಲು ಸಿದ್ಧನಾದನು. ಈ ಮದುವೆಯ ಸಮಾರಂಭವು ವಿಜೃಂಭಣೆಯಿಂದ ನಡೆಯಿತು. ಆ ಸಮಯದಲ್ಲಿ ಮುರಾರ ಪಂತನು ವರಪಕ್ಷದಲ್ಲಿದ್ದನಾದ್ದರಿಂದ ಕುತುಬಶಾಹನು ತುಂಬ ಅಹಂಕಾರಿಯಾಗಿ ವರ್ತಿಸಿದನು.

ಮಹ್ಮದ ಆದಿಲಶಹನ ತಾಯಿ ತಾಜ ಸುಲ್ತಾನಳು ಹಿಜರಿಸನ್ ೧೦೪೩ರಲ್ಲಿ ಸತ್ತಳು. ಅವಳನ್ನು ಜೋರಾಪುರದ (ಇಬ್ರಾಹಿಮ) ರೋಜಾದಲ್ಲಿ ದಫನ ಮಾಡಿದ ಸಂಗತಿಗೆ 'ಮಹ್ಮದ ನಾಮಾ' ದಲ್ಲಿ ಒಂದು ಅಧ್ಯಾಯವೇ ಮೀಸಲಾಗಿದೆ.

ಹಿಜರಿಸನ್ ೧೦೪೭ ರಲ್ಲಿ ಮಹ್ಮದ ಆದಿಲಶಹನು ಬಮ್ಮನಹಳ್ಳಿಗೆ ಬಂದು ಅನಂತರ ಸೋಮವಾರ ಜಿಲ್ಕಾದ ೧೨ರಂದು ಹಜರತ ಸಯ್ಯದ ಮಹಮ್ಮದ ಹುಸೇನಿ ಗೇಸೂ ದರಾಜರ ಯಾತ್ರೆಗಾಗಿ ಹೊರಟನು. ಆ ಉರುಸು ಸಮಾರಂಭವು ಜಿಲ್ಕಾದ ೧೬ ರಂದು ಮುಕ್ತಾಯವಾಯಿತು. (ಕಲಬುರ್ಗಿ) ಮತ್ತು ಬಾದಶಹನು ಜಿಲ್ಹೇಜ ೧೦ರಂದು ತಿರುಗಿ ಮುಹಮ್ಮದಪುರ, (ವಿಜಾಪುರ) ಕ್ಕೆ ಬಂದು ಮುಟ್ಟಿದನು. ಈ ಯಾತ್ರೆಯಲ್ಲಿ 'ಮಹಮ್ಮದ ನಾಮಾ' ಗ್ರಂಥದ ಲೇಖಕ ಜಹೂರನೂ ರಾಜನ ಜೊತೆಗಿದ್ದನು. ಹಾಗೂ ಈ ಸಂದರ್ಭದಲ್ಲಿ ಆತನು ರಾಜನಿಗೆ ಒಂದು 'ಕಸೀದ' (ಕಥನ ಕಾವ್ಯ)ವನ್ನು ಕಾಣಿಕೆಯಾಗಿ ಕೊಟ್ಟನು.

### ಕೆಂಪೇಗೌಡನು ಬೆಂಗಳೂರನ್ನು ಕೊಟ್ಟದ್ದು

ಅನಂತರ ರುಸ್ತುಮ ಜಮಾನನು ಬೆಂಗಳೂರು ಕಡೆಗೆ ಹೊರಟನು ಮತ್ತು ಅಲ್ಲಿ ಮುಟ್ಟಿದ ನಂತರ ಯುದ್ಧಕ್ಕೆ ಪ್ರಾರಂಭಿಸಿದನು. ಮೂರು ದಿನಗಳಲ್ಲಿ ಆತನು ಪಟ್ಟಣವನ್ನು ತನ್ನ ಕೈವಶಮಾಡಿಕೊಂಡನು. ಅದನ್ನು ಕಂಡ ಬೆಂಗಳೂರಿನ ಕೆಂಪೇಗೌಡನು

ಕೆಂಗನಾಯಕನ ಮನಸ್ಸನ್ನು ಬದಲಿಸಿದನು. ಆಗ (ಆತನ) ೩೦ ಸಾವಿರ ಕುದುರೆ ಸವಾರರು ಕೂಡ ತಿರುಗಿ ಹೋಗ ಹತ್ತಿದರು. ಇದನ್ನು ಕಂಡ ರುಸ್ತುಮ ಜಮಾನನು ಆತನ (ಕೆಂಗನಾಯಕನ) ಡೇರೆಯುತ್ತ ಹೋಗಿ ಅವನಿಗೆ ಬಾದಶಹರಿಂದ ಮಾನ–ಮಾರ್ಯಾದೆ ಮಾಡಿಸುವ ಆಶ್ವಾಸನೆಯನ್ನು ಕೊಟ್ಟು ಮತ್ತೆ ತನ್ನತ್ತ ಸೆಳೆದುಕೊಂಡನು. ಆಗ ಕೆಂಗನಾಯಕನು ಅವನಿಗೆ ಹೇಳಿದನು. 'ಈಗ ಈ ಕೋಟೆಯನ್ನು ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡುವುದು ಶ್ರೇಯಸ್ಕರವಲ್ಲ. ಯಾಕೆಂದರೆ ನಮ್ಮವರಲ್ಲಿ ಬಹುತೇಕ ಜನರು ಗಾಯಾಳುಗಳಾಗಿದ್ದಾರಲ್ಲದೆ, ದಣಿದಿದ್ದಾರೆ ಮತ್ತು ವೈರಿಗಳ ಸೈನ್ಯ ದೊಡ್ಡದಾಗಿದೆ. ನಾನು ಕೋಟೆಯ ರಾಜನೊಂದಿಗೆ ಮಾತನಾಡಿ ಆತನನ್ನು ಕೋಟೆಯ ಹೊರಗೆ ಬರುವಂತೆ ಮಾಡುವೆನು' ಎಂದನು. ಅದರಂತೆ ರುಸ್ತುಮ ಜಮಾನನು ತನ್ನ ವಕೀಲನನ್ನು ಕಳಿಸಲು ಒಪ್ಪಿದನು. ಕೊನೆಗೆ ಕೆಂಪೇಗೌಡನು ಕೋಟೆಯ ಒಳಗಿನ ಸಾಮಾನು ಸರಂಜಾಮುಗಳೊಂದಿಗೆ ಬೆಂಗಳೂರು ಕೋಟೆಯನ್ನು ರುಸ್ತುಮನ ಸ್ವಾಧೀನ ಪಡಿಸಿದನು. ರುಸ್ತುಮನು ಆ ಪ್ರದೇಶದ ಸಂರಕ್ಷಣೆಗಾಗಿ ಶಾಹಜಿ (ಶಿವಾಜಿಯ ತಂದೆ) ಯನ್ನು ನೇಮಿಸಿ ಆತನನ್ನು ಬೆಂಗಳೂರಲ್ಲಿ ಇಟ್ಟನು.

ಅನಂತರ ರುಸ್ತುಮನು ಶ್ರೀರಂಗಪಟ್ಟಣದ ಕಂಠೀರಾಯನೆಂಬ ಹೆಸರಿನ ರಾಜನನ್ನು ಗೆಲ್ಲಲು ಹೊರಟನು. ಒಂದು ತಿಂಗಳ ಮುತ್ತಿಗೆಯ ಅನಂತರ ಕಂಠೀರಾಯನು ಜಿಲ್ಲೆಯನ್ನು ತನ್ನ ಸುಪರ್ದಿನಲ್ಲಿಯೇ ಇಟ್ಟುಕೊಂಡು, ದಂಡರೂಪವಾಗಿ ೫ ಲಕ್ಷ ಹೊನ್ನನ್ನು ಕೊಡಲು ಒಪ್ಪಿದನು. ರುಸ್ತುಮನು ಆತನ ವಿನಂತಿಯನ್ನು ಮಾನ್ಯ ಮಾಡಿದನು.

## ಗ್ರಂಥದ ಉಪಲಬ್ಧಿ

ಈ ಗ್ರಂಥದ ಪರ್ಶಿಯನ್ ಹಸ್ತ ಪ್ರತಿಯು ಪಂಜಾಬಿನ ಕಪೂರ್ತಲ ಸಂಸ್ಥಾನದ ಪುಸ್ತಕ ಸಂಗ್ರಹಾಲಯದಲ್ಲಿ ಮಾತ್ರ ಇದ್ದದ್ದನ್ನು, ೧೬೨೦–೩೦ರ ಮಧ್ಯ ಸರ್. ಜದುನಾಥ ಸರಕಾರರು ಮೊದಲು ಪತ್ತೆ ಹಚ್ಚಿದರು. ೧೬೨೯ರ 'ಮಾಡರ್ನ ರಿವ್ಯೂ'ದಲ್ಲಿ ಅವರು ಈ ಕುರಿತು ಬರೆದರು. ಅನಂತರ ಆ ಪ್ರತಿಯನ್ನು ಸರ್. ಜದುನಾಥ ಸರಕಾರ ಅವರಿಂದ ಪುಣೆಯ ಫರ್ಗ್ಯೂಸನ್ ಕಾಲೇಜಿನ ಪರ್ಶಿಯನ್ ವಿದ್ವಾಂಸ ಪ್ರೊ. ಭಗವದ್ದಯಾಳ ವರ್ಮಾ ಅವರು ಪಡೆದು, ಅದರ ಸಾರಾಂಶವನ್ನು ಇಂಗ್ಲೀಷನಲ್ಲಿ ಪ್ರಕಟಿಸಿದರು. ಇಂದು ಮೂಲ ಹಸ್ತಪ್ರತಿಯು ಪಂಜಾಬ ಸ್ಟೇಟ ಆರ್ಕೀವ್ಸ ಪಟಿಯಾಲದಲ್ಲಿದೆ.[೮]

ಇದರ ಇನ್ನೊಂದು ಪ್ರತಿಯು ವಿಜಾಪುರದ ವಸ್ತು ಸಂಗ್ರಹಾಲಯದಲ್ಲೂ ಇದೆ. ಅದರ ಕಾಗದ, ಮಸಿ, ಲೇಖನ ಪದ್ಧತಿಯಿಂದ ಅದು ಈ ಶತಮಾನದಲ್ಲಿ ನಕಲು ಮಾಡಿದ ಪ್ರತಿಯಾಗಿರಬೇಕು. ಗ್ರಂಥದ ಕೊನೆಯಲ್ಲಿ ಅದನ್ನು ನಕಲು ಮಾಡಿದವನು ಸಯ್ಯಾದ ಫಸೀಹ ಅಹಮದ ದೀಬಾಜಿ ಊರು ನರಹಟ, ಜಿಲ್ಲೆ–ಗಯಾ, ಕ್ರಿ. ಶ. ೧೯೨೦ ಎಂಬುದಾಗಿಯೂ ನಮೂದಾಗಿದೆ. ಬಹುಶಃ ಜದುನಾಥ ಸರಕಾರ ಅವರಿಂದ ಈ ಗ್ರಂಥದ ಪತ್ತೆಯಾದನಂತರ, ಸ್ಥಳಿಯರು ಪ್ರಯತ್ನಿಸಿ ಈ ನಕಲನ್ನು ಪಡೆದಿರುವ ಸಾಧ್ಯತೆ ಇದೆ.

**೩.೧.೪ ಫುತೂಹತ್-ಇ-ಆದಿಲಶಾಹಿ**

'ಫುತೂಹತ್-ಇ-ಆದಿಲಶಾಹಿ' ಇತಿಹಾಸ ಗ್ರಂಥವನ್ನು ಬರೆದ ಫುಜೂನಿ ಅಸ್ತ್ರಾಬಾದಿ ಹಾಶಿಮ್ ಬೇಗ ಎಂಬವನು ವಿಜಾಪುರದ ಖ್ಯಾತ ಸೇನಾಪತಿಗಳಲ್ಲೊಬ್ಬನಾದ ಮುಸ್ತಾಫಾಖಾನನ ಆಶ್ರಯದಲ್ಲಿದ್ದನು. ಆಕಸ್ಮಿಕವಾಗಿ ಆತ ವಿಜಾಪುರಕ್ಕೆ ಬರಬೇಕಾಯಿತು. ಮಕ್ಕಾಯಾತ್ರೆಯಿಂದ ಹಿಂದುಸ್ತಾನಕ್ಕೆ ಬರುವಾಗ ಭೂಮಾರ್ಗವು ಅಸುರಕ್ಷಿತವೆಂದು ಕೇಳಿ, ಸಮುದ್ರ ಮಾರ್ಗದಿಂದ ಬಂದಾಗ ಪಶ್ಚಿಮ ತೀರದ ಮಲಬಾರದಲ್ಲಿ ಬಂದು ಇಳಿದನು. ಆಗ ವಿಜಾಪುರದಲ್ಲಿ ಮಹಮ್ಮದ ಆದಿಲಶಹನು ಆಳುತ್ತಿದ್ದನು. (೧೬೨೬-೧೬೫೬) ವಿಜಾಪುರಕ್ಕೆ ಬಂದು ಅಲ್ಲಿಯ ಸೇನಾಪತಿಯಾಗಿದ್ದ ಮುಸ್ತಾಫಾಖಾನನ ಆಶ್ರಯವನ್ನು ಪಡೆದನು. ಕ್ರಿ. ಶ. ೧೬೪೦-೪೩ರ ಮಧ್ಯ ಬರೆದಿರಬಹುದಾದ 'ಫುತೂಹತ್-ಇ-ಆದಿಲಶಾಹಿ' ಗ್ರಂಥವು ಆರು ಅಧ್ಯಾಯಗಳನ್ನೊಳಗೊಂಡಿದೆ. ಪ್ರತಿಯೊಂದು ಅಧ್ಯಾಯವು ವಿಜಾಪುರದ ಒಬ್ಬೊಬ್ಬ ಬಾದಶಹನಿಗೆ ಮೀಸಲಾಗಿದೆ. ಯುಸುಫ, ಇಸ್ಮಾಯಿಲ್, ಮೊದಲ ಇಬ್ರಾಹಿಮ, ಮೊದಲ ಅಲಿ, ಎರಡನೆಯ ಇಬ್ರಾಹಿಮ ಹಾಗೂ ಮಹಮ್ಮದ ಆದಿಲಶಹ-ಈ ಆರು ಬಾದಶಹರ ರಾಜ್ಯಕಾಲದ ಚಿತ್ರಣವಿದೆ. ಗ್ರಂಥಕರ್ತನ ಸಮಕಾಲೀನರಾದ ಕೊನೆಯ ಇಬ್ಬರು ಬಾದಶಹರ ಅಧ್ಯಾಯಗಳು ಉಳಿದ ಅಧ್ಯಾಯಗಳಿಗಿಂತ ಅಧಿಕ ವಿವರಗಳನ್ನು ಒಳಗೊಂಡಿವೆ.

ವಿದ್ವಾಂಸರ ಅಭಿಪ್ರಾಯದಲ್ಲಿ ಫುಜುನಿಯು ತನ್ನ ಗ್ರಂಥವನ್ನು ಬರೆಯುವಾಗ ಉಪಲಬ್ಧವಿದ್ದ ಎಲ್ಲ ದಾಖಲೆಗಳನ್ನು ತನ್ನ ಎದುರಿಗೆ ಇಟ್ಟು ಕೊಂಡಿಲ್ಲವೆಂದು ಕಾಣುತ್ತದೆ. ಆದರಿಂದಾಗಿ ಅನೇಕ ತಪ್ಪುಗಳಾಗಿವೆ. ವಿಶೇಷವಾಗಿ ಮರಾಠರ ಹೆಸರುಗಳು ಹಾಗೂ ಘಟನೆಗಳು ಆ ಮೊದಲಿನ ಇತಿಹಾಸ ಗ್ರಂಥಗಳಿಂದ ಸರಿಯಾಗಿ ತಿಳಿದಿರುವಾಗ, ಫುಜೂನಿಯ ತಪ್ಪುಗಳು ಎದ್ದು ಕಾಣುತ್ತವೆ. ಆದರೂ ಫರಿಶ್ತಾನ ಅನಂತರದ ಮೂವತ್ತು ವರುಷಗಳ (ಕ್ರಿ. ಶ. ೧೬೦೬-೧೬೩೯) ಇತಿಹಾಸವನ್ನು ಸರಿಯಾಗಿ ಗುರುತಿಸಲು ಆತನ ಗ್ರಂಥ ಸಹಾಯವಾಗುತ್ತದೆ. ಅದಲ್ಲದೆ ಆತ ಆದಿಲಶಾಹಿಗಳ ಸೈನ್ಯ ಹಾಗೂ ಪರರಾಜ್ಯಗಳೊಂದಿಗಿನ ಸಂಬಂಧಗಳನ್ನು ವಿವರವಾಗಿ ವರ್ಣಿಸಿದ್ದಾನೆ. ವಿಶೇಷವಾಗಿ ಕ್ರಿ.ಶ. ೧೬೦೦-೪೪ರ ಮಧ್ಯದ ಆದಿಲಶಾಹಿ ಮೊಗಲರ ಸಂಬಂಧವನ್ನು ಗುರುತಿಸಲು ಫುಜೂನಿಯ ಗ್ರಂಥ ಸಹಕಾರಿಯಾಗಿದೆ.

ಶಿವಾಜಿಗೆ ಸಂಬಂಧಿಸಿದ ಪುಟಗಳ ಸಂಕ್ಷಿಪ್ತ ಅನುವಾದವನ್ನು ಜದುನಾಥ ಸರಕಾರ ಅವರು ಮಾಡಿದ್ದು, ಅದನ್ನು ಅವರು ತಮ್ಮ 'ಹೌಸ ಆಫ್ ಶಿವಾಜಿ' ಯಲ್ಲಿ ಪ್ರಕಟಿಸಿದ್ದಾರೆ.

**೩.೧.೫ ತಾರೀಖ-ಇ-ಅಲಿ**

'ತಾರೀಖ-ಇ-ಅಲಿ' ಇತಿಹಾಸ ಗ್ರಂಥವನ್ನು ಬರೆದವನು ನೂರುಲ್ಲಾ ಇಬ್ನ ಕಾಜೀ ಸಯ್ಯಾದ ಅಲಿ ಮುಹಮ್ಮದ ಹುಸೇನಿ. ಅವನು ಎರಡನೆಯ ಅಲಿ ಆದಿಲಶಹನ (ಕ್ರಿ. ಶ. ೧೬೫೬-೧೬೭೨) ಆಸ್ಥಾನದಲ್ಲಿದ್ದನು. 'ಮುಹಮ್ಮದ ನಾಮಾ'ದಲ್ಲಿ ಈತನ

ಕುರಿತು ಉಲ್ಲೇಖ ಬರುತ್ತದೆ. ಚಂದ್ರಗುತ್ತಿಯ ಹತ್ತಿರ ಮೀರ ಜುಮ್ಲಾನು ಗದ್ದಲ ಪ್ರಾರಂಭಿಸಿದಾಗ, ಆತನನ್ನು ಹತ್ತಿಕ್ಕಲು ಮಹಮ್ಮದ ಆದಿಲಶಾಹನು ಖಾನ ಮಹಮ್ಮದನನ್ನು ಕಳಿಸಿದ್ದನಂತೆ. ಆತನು ಬೇಗ ಬರದಿದ್ದಾಗ ಮಹಮ್ಮದ ಆದಿಲಶಹನು ಈ ನೂರುಲ್ಲಾನನ್ನು ಕಳಿಸಿದನು. ಆತ ಅಲ್ಲಿ ಉತ್ತಮ ರೀತಿಯಾಗಿ ಕೆಲಸ ಮಾಡಿದ್ದಕ್ಕಾಗಿ ಅವನಿಗೆ 'ಸರಖೈಲುಲ-ಮಮಾಲಿಕ' ಎಂಬ ಬಿರುದನ್ನೂ ಬಾದಶಹನು ಕೊಟ್ಟನು. ಇದರಿಂದಾಗಿ ನೂರುಲ್ಲಾ ಇಬ್ನ ಕಾಜಿ ಮಹಮ್ಮದ ಆದಿಲಶಹನ ಆಸ್ಥಾನದಲ್ಲಿ ರಾಯಭಾರಿಯಾಗಿಯೂ ಕೆಲಸ ಮಾಡಿದ್ದನೆಂದು ತಿಳಿದು ಬರುತ್ತದೆ.

ಸಮಕಾಲೀನ ಕವಿ ನುಸ್ರತಿಯು ತನ್ನ 'ಅಲಿನಾಮಾ' ಕಾವ್ಯದಲ್ಲಿ 'ಶಾಹ ನೂರುಲ್ಲಾ ಉರುಫ್ ಅಬುಲ್ ಮು ಅಲಿ ಎಂಬವನು ಅಲಿ ಆದಿಲಶಹನ ವಿಜಯಗಳ ಕುರಿತು ಒಂದು ಪುಸ್ತಕವನ್ನು ಬರೆದಿದ್ದಾನೆ' ಎಂದು ಹೇಳಿದ್ದಾನೆ. ಬಹುಶಃ ಈ ಗ್ರಂಥದ ಕುರಿತೇ ಹೇಳಿದ್ದಾನೆ. ಆತನಿಗೆ 'ಶಾಹ' ಎಂಬ ಬಿರುದೂ ಇತ್ತೆಂದು ಹೇಳಬಹುದು. ಅನಂತರದ ಜುಬೇರಿಯು ತನ್ನ 'ಬುಸಾತಿನ-ಅಲ್-ಸಲಾತಿನ' ದಲ್ಲಿ ಈ ಗ್ರಂಥವನ್ನು 'ಇನ್ಶಾಯೆ ಅಲಿ ಆದಿಲಶಾಹ' ಎಂದು ಕರೆದಿದ್ದಾನೆ.

'ತಾರೀಖ-ಇ-ಅಲಿ' ಗ್ರಂಥವನ್ನು ನೂರುಲ್ಲಾ ಇಬ್ನ-ಕಾಜಿಯು ಎರಡನೆಯ ಅಲಿ ಆದಿಲಶಹನ ಅಣತಿಯ ಮೇರೆಗೆ, ಕ್ರಿ. ಶ. ೧೬೬೭ರಲ್ಲಿ ರಚಿಸಿದನು. ಗ್ರಂಥದ ಪ್ರಾರಂಭದಲ್ಲಿಯೇ ಆತನು ಹಾಗೆ ಹೇಳಿಕೊಂಡಿದ್ದಾನೆ:

'ಬಾದಶಹನು ನನಗೆ ತನ್ನ ಕಾಲಕಿರ್ದಿಯ ವಿಷಯಗಳನ್ನು ಹಾಗೂ ಪರಾಕ್ರಮಗಳನ್ನು ಬರೆದು ಇಡಲು ಆಜ್ಞೆ ಮಾಡಿದನು. ನನಗೆ ಇತರ ಹಲವಾರು ಕೆಲಸಗಳಿದ್ದರೂ ಈ ಕೆಲಸ ನನ್ನಿಂದ ಆದೀತೋ- ಇಲ್ಲವೋ ಎಂದು ಚಿಂತಿಸುತ್ತಿದ್ದೆ. ಕೊನೆಗೆ ನಾನು ಆತನ ಆಜ್ಞೆಯನ್ನು ಶಿರಸಾವಹಿಸಿ ಮಾಡಬೇಕೆಂದು ನಿಶ್ಚಯಿಸಿ ಬರೆಯಲು ಪ್ರಾರಂಭಿಸಿದೆ.'

ಈ ಗ್ರಂಥದಲ್ಲಿ ಪ್ರಾರಂಭದ ಸ್ತುತಿ ಪರವಾದ ಭಾಗಗಳನ್ನು ಬಿಟ್ಟರೆ, ಎರಡನೆಯ ಅಲಿ ಆದಿಲಶಹನ ಜನ್ಮ ಬಾಲ್ಯ, ಮಹ್ಮದ ಆದಿಲಶಹನ ಮರಣ, ಅಲಿಯ ರಾಜ್ಯಾಭಿಷೇಕ, ಶಿವಾಜಿ- ಅಫಜಲಖಾನರ ಘಟನೆ, ಬಡೀ ಸಾಹೇಬಾಳ ಮಕ್ಕಾಯಾತ್ರೆ, ಸಿದ್ದೀ ಚೌಹಾರನ ಬಂಡು, ಮಲೆನಾಡು ವಿಜಯ ಹಾಗೂ ವಿಜಾಪುರ- ಮೊಗಲರ ಯುದ್ಧದ ವಿಷಯಗಳ ವಿವರವಾದ ಚಿತ್ರಣವಿದೆ. ಜಯಸಿಂಗ ಹಾಗೂ ಶಿವಾಜಿ, ವಿಜಾಪುರದ ಮೇಲಿನ ಆಕ್ರಮಣದ ಕಥೆಯೂ ಇದೆ. ಬಹುತೇಕ ಆಸ್ಥಾನ ವರದಿಯಂತಿದ್ದ ಈ ಗ್ರಂಥವು ವಿಶೇಷವಾಗಿ ಸಮಕಾಲೀನ ವಿಜಾಪುರದ ಚರಿತ್ರೆಯಲ್ಲಿ ಕರ್ನಾಟಕದ ಕಥೆಯನ್ನು ತಿಳಿಸುವಲ್ಲಿ ಬೆಳಕನ್ನು ಚೆಲ್ಲುತ್ತದೆ.

ಮಾದರಿಗಾಗಿ ಕೆಲವು ಘಟನೆಗಳನ್ನು ನೋಡಬಹುದು.

**ಅಲಿಯ ಜನ್ಮ**

ಮುಹಮ್ಮದ ಆದಿಲಶಹನು ಸಿಂಹಾಸನವನ್ನು ಅಲಂಕರಿಸಿದ ಮೇಲೆ ಕೆಲವು ಕಾಲದ ಅನಂತರ, ಅವನ ಸ್ತ್ರೀಯರಲ್ಲೊಬ್ಬಳು ಬಸಿರಾಗಿ ಹಡೆದಳು. ಇದನ್ನು ತಿಳಿದ

ಬಾದಶಹನು ಸುದ್ದಿಯನ್ನು ತಂದವನಿಗೆ ಮತ್ತು ಇತರರಿಗೆ ಕಾಣಿಕೆಗಳನ್ನು ಕೊಟ್ಟನು. ಅನಂತರ ಬಾದಶಹನು ಹುಟ್ಟಿದ ಮಗುವಿನ ಜನ್ಮ ದಿನ ಸಮಯ ಇತ್ಯಾದಿಗಳು ಎಷ್ಟರ ಮಟ್ಟಿಗೆ ಶುಭಕಾರಿಯಾಗಿವೆಯೆಂದು, ಜ್ಯೋತಿಷಿಗಳನ್ನು ಕೇಳಿದನು. ಮಗುವಿನ ಜಾತಕ ತುಂಬ ಪ್ರಶಸ್ತವಾಗಿದೆ ಎಂದು ಅವರು ಹೇಳಿದರು. ಅದು ಶುಕ್ರವಾರ ದಿನಾಂಕ ೧೬ ರಬಿಲಾಖರ ಹಿಜರಿಸನ್ ೧೦೪೮ರ ಮೊದಲ ಪ್ರಹರದಲ್ಲಿ ಮಗು ಹುಟ್ಟಿದ ಸಮಯವಾಗಿತ್ತು.

ಸುಲ್ತಾನ ಮಹಮ್ಮದನ ಅತ್ಯಂತ ಪ್ರೀತಿಯ ಬಡೀ ಸಾಹೇಬಾಳು ಆ ಮಗುವಿನ ಪಾಲನ ಪೋಷಣೆಗಳನ್ನು ಮಾಡುವ ಇಚ್ಛೆಯನ್ನು ವ್ಯಕ್ತ ಪಡಿಸಿದಳು. ಮತ್ತು ಅದರಲ್ಲಿಯ ಲಾಭವನ್ನೂ ಹೇಳಿದಳು. ಅದನ್ನು ಕೇಳಿದ ಬಾದಶಹನು ಅವಳ ಮಾತುಗಳಿಗೆ ಒಪ್ಪಿ ಮಗುವಿನ ನಾಮಕರಣ ಮಾಡಿಸಿ ಅವಳ ಸ್ವಾಧೀನಪಡಿಸಿದನು. ಈ ಮಗುವಿನ ಜನ್ಮ ವಿಷಯದ ಕುರಿತು ಖಾಸಗಿಯಾಗಿ ಆಕಾ ಉರುಫ್ ಮು ಅಜಿಮ್‌ನು ಒಂದು ಕವಿತೆಯನ್ನು ಬರೆದು ಬಾದಶಹನ ಎದುರಿಗೆ ಹಾಡಿ ತೋರಿಸಿದನು. ಅದನ್ನು ಕೇಳಿದ ಬಾದಶಹನು ಸಂತುಷ್ಟನಾಗಿ ಅವನಿಗೆ ಕಾಣಿಕೆಗಳನ್ನು ಕೊಟ್ಟನು. ಯೋಗ್ಯ ಸಮಯದಲ್ಲಿ ಮಗುವಿಗೆ ಯುವರಾಜ (ವಲೀ ಅಹದ) ಪಟ್ಟವನ್ನೂ ಕಟ್ಟಿದನು.[೧೦]

**ಬಡೀ ಸಾಹೇಬಳ ಮಹಾಯಾತ್ರೆ**

ಬಡೀ ಸಾಹೇಬಳು ಹಜ್ ಯಾತ್ರೆಗೆ ಹೋಗಬೇಕೆಂದು ಇಚ್ಛಿಸಿ ಬಾದಶಹನಿಗೆ ತಿಳಿಸಿದಳು. ಅವಳ ಇಚ್ಛೆಯನ್ನು ಮನ್ನಿಸಿ ಬಾದಶಹನು ಅವಳ ಯಾತ್ರೆಯ ಸಿದ್ಧತೆಯನ್ನು ಮಾಡಿಸಿ ಅವಳೊಂದಿಗೆ ಇಬ್ರಾಹಿಮಖಾನನ್ನು ಜೊತೆ ಮಾಡಿ ಕಳಿಸಿದನು. ತಾನು ಸ್ವತಃ ಅವಳನ್ನು ಬೀಳ್ಕೊಡಲು ವಿಜಾಪುರದಿಂದ ಒಂದೂವರೆ ಗ್ರಾಮಗಳ ಅಂತರದ ಮೇಲಿನ ತಿಕೊಟಾ ಗ್ರಾಮದವರೆಗೂ ಹೋಗಿದ್ದನು.

**ಮಲೆನಾಡು ವಿಜಯ**

ಮಲೆನಾಡಿನ ಜಮೀನದಾರನಾದ ಭದ್ರಪ್ಪ ನಾಯಕನು ತುಂಬ ಕಪಟದಿಂದ ತನ್ನ ಪ್ರದೇಶದ ಸುತ್ತಲಿನ ಕೆಲವು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡು ಬಾದಶಹನ ವಿರುದ್ಧ ಬಂಡೆದ್ದನು. ಇದನ್ನು ಕೇಳಿದ ಬಾದಶಹನು ಅವನ ವಿರುದ್ಧ ಸಯ್ಯದ ಇಲಿಯಾಸ ಉರುಫ್ ಶಾರ್ಜಾಖಾನನನ್ನು ಕಳಿಸಿದನು. ಅವನು ತುಂಬ ಪರಾಕ್ರಮದಿಂದ ಹೋರಾಡಿದನು. ಇದರಲ್ಲಿ ಬಾದಶಹನ ಸೈನಿಕರು ಅಧಿಕ ಪ್ರಮಾಣದಲ್ಲಿ ಹತರಾದರು. ಅಂಥದ್ದರಲ್ಲಿ ದುರ್ದೈವದಿಂದ ಶಾರ್ಜಾಖಾನನು ಒಂದು ಬಾವಿಯಲ್ಲಿ ಬಿದ್ದ ಕಾರಣ ಬಾದಶಹನ ಸೈನ್ಯದಲ್ಲಿ ಗೊಂದಲವಾಯಿತು. ಯುದ್ಧವನ್ನು ನಿಲ್ಲಿಸಿ ಶಾರ್ಜಾಖಾನನನ್ನು ಬಾವಿಯಿಂದ ಎತ್ತಿ ಅವನ ಗಾಯಗಳಿಗೆ ಉಪಚಾರ ಮಾಡಿದರು. ತನ್ನ ಸೈನ್ಯದ ಈ ಹಿನ್ನಡೆಯನ್ನು ಕೇಳಿದ ಬಾದಶಹನು ತಾನೆ ಸ್ವತಃ ಹಿಜರಿಸನ್ ೧೦೭೨ರ ಶಾಬಾನ ಒಂದರಂದು (ದಿನಾಂಕ ೧೬೬೯ ಮಾರ್ಚ್ ೧೨) ಸೈನ್ಯದೊಂದಿಗೆ ಬಂಕಾಪುರದತ್ತ ಹೊರಟನು. ಇದನ್ನು ಕೇಳಿದ ಶಾರ್ಜಾಖಾನನು ಹುರುಪಿನಿಂದ ಸೋಂದಾ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳಲು ಹೊರಟನು. ಇದನ್ನು ಕೇಳಿದ ಸೋಂದೆಯ ಕೋಟೆಯ ಒಳಗಿನ ಜನರು ಪ್ರತಿಭಟಿಸಲು ಸನ್ನದ್ಧರಾದರು. ಶಾರ್ಜಾಖಾನನೊಂದಿಗಿನ ಯುದ್ಧದಲ್ಲಿ

ಸೋಂದೆಯ ಜನರು ಬಾದಶಹನ ಅನೇಕ ಜನರನ್ನು ಕೊಂದರು. ಇತ್ತ ಶಾರ್ಜಾಖಾನನೂ ತನ್ನ ಜನರೊಂದಿಗೆ ಅವರ ಮೇಲೆ ಪ್ರತಿ ಹಲ್ಲೆ ಮಾಡಿದನು. ಕೋಟೆಯನ್ನು ಭೂಮಿಸಮ ಮಾಡಿದನು.

ಇತ್ತ ಬಾದಶಹನು ಬಂಕಾಪುರದಲ್ಲಿ ಮುಕ್ಕಾಮು ಮಾಡಿದಾಗ ಸುತ್ತಲಿನ ಜನಲೆಲ್ಲರೂ ವಶರಾದರು. ಕರ್ನಾಟಕದ ಪಾರುಪತ್ಯೆಗಾಗಿ ನಿಯಮಿಸಿದ ನವಾಬ ಅಬ್ದುಲ್ ರಹೀಮ ಬಹಲೋಲಖಾನನಿಗೆ ಅಲ್ಲಿಂದಲೇ ಫರ್ಮಾನನ್ನು ಕಳಿಸಿ ಹೊರಟು ಬರಲು ಹೇಳಿದನು. ಆತನು ಶಹಾಜಿ ರಾಜಾ ಹಾಗೂ ಇತರ ಸರದಾರರೊಂದಿಗೆ ಬಾದಶಹನನ್ನು ಕಾಣಲು ಹೊರಟರು. ತುಂಗಭದ್ರಾ ನದಿಯ ದಂಡೆಯ ಮೇಲೆ ಬಾದಶಹನೊಂದಿಗೆ ಆತನ ಭೆಟ್ಟಿಯಾಯಿತು.

ಆಗ ಭದ್ರಪ್ಪನಾಯಕನನ್ನು ಮಣಿಸುವ ಯೋಜನೆ ಸಿದ್ಧವಾಯಿತು. ಘನಘೋರ ಯುದ್ಧದ ಅನಂತರ ಭದ್ರಪ್ಪನಾಯಕನು ಬಾದಶಹನಿಗೆ ಶರಣಾಗತನಾಗಿ. ಅವನ ಆಶ್ರಯದಲ್ಲಿ ಇರಲು ಒಪ್ಪಿಕೊಂಡನು. ಅನೇಕ ಮುತ್ತು ರತ್ನ ಹೊನ್ನುಗಳನ್ನು ಕಾಣಿಕೆಯಾಗಿ ಬಾದಶಹನಿಗೆ ಕೊಟ್ಟನು. ದಿನಾಂಕ ೩-೧೨-೧೬೬೯ ರಂದು ಬಾದಶಹನು ವಿಜಾಪುರಕ್ಕೆ ಮರಳಿದನು.[೧೧]

**ಹುಟ್ಟು ಹಬ್ಬದ ಸಂಗತಿ ತುಲಾಭಾರ!**

ಅನಂತರ ಬಾದಶಹನು ತನ್ನ ಜನ್ಮ ದಿನವನ್ನು ಆಚರಿಸಲು ನಿರ್ಧರಿಸಿದನು. ಅದರಂತೆ ವ್ಯವಸ್ಥೆ ಮಾಡಲು ಅಧಿಕಾರಿಗಳನ್ನು ಕರೆದು ಆಜ್ಞಾಪಿಸಿದನು. ಅಧಿಕಾರಿಗಳು ದೊಡ್ಡದಾದ ಮಂಟಪಗಳನ್ನು ರಚಿಸಿ ಅವುಗಳಲ್ಲಿ ಎಲ್ಲ ವ್ಯವಸ್ಥೆಗಳನ್ನು ಮಾಡಿದರು. ಬಾದಶಹನು ತನ್ನ ತುಲಾಭಾರವನ್ನು ಮಾಡಿಕೊಂಡು, ಆ ದ್ರವ್ಯವನ್ನು ದಾನಮಾಡುವುದರಿಂದ ಪುಣ್ಯ ಬರುತ್ತದೆ ಎಂಬುದನ್ನು ಕೇಳಿ, ಅಖಂಡ ೪೦ ದಿನಗಳವರೆಗೆ ತನ್ನ ಹುಟ್ಟು ಹಬ್ಬದ ಆಚರಣೆಯ ಸುಖದಲ್ಲಿಯೆ ಕಳೆದನು. ೪೦ನೆಯ ದಿನ ಅಂದರೆ ತಾರೀಖು ೨೧ ರಬೀಲಾಖರ ದಿನ, ತಾನು ತುಲಾಭಾರವನ್ನು ಮಾಡಿಸಿಕೊಂಡು, ತನ್ನ ತೂಕದ ದ್ರವ್ಯವನ್ನು ದಾನ ಮಾಡಿದನು. ಅದರಂತೆ ಆದಿಲಶಾಹಿ-ಕುತುಬಶಾಹಿ ಸರದಾರರಿಗೆ ತರತರದ ಕಾಣಿಕೆಗಳನ್ನು ಕೊಟ್ಟು ಸಂತುಷ್ಟ ಗೊಳಿಸಿದನು. ಈ ಪ್ರಸಂಗವನ್ನು ಹಾಡಿನ ರೂಪದಲ್ಲಿ ಹಾಡಲು ಕವಿತೆಯನ್ನು ರಚಿಸಲು ಶಾಹ ಅಬ್ದುಲ್-ಮುಲಅಲಿಗೆ ಹೇಳಿದನು. ಅವನ ಆಣತಿಯಂತೆ ರಚಿಸಿದ ಕಾವ್ಯವನ್ನು ಅಬುಲ್-ಮುಲಅಲಿಯು ಬಾದಶಹನಿಗೆ ಹಾಡಿ ತೋರಿಸಿದಾಗ, ಅದು ಆತನಿಗೆ ಅತ್ಯಂತ ಹಿಡಿಸಿತು. ಮತ್ತು ಅದನ್ನು ಈ ಪುಸ್ತಕದಲ್ಲಿ ಸೇರಿಸಲು ಆಜ್ಞಾಪಿಸಿದನು.[೨]

## ೩.೧.೬ ಹಫ್ತ ಕುರ್ಸೀ

ಫಿತೂರಖಾನ ವಲ್ಲದ ಅಸದಖಾನ ಲ್ಯಾರಿಯು ಬೆಳಗಾವಿಯ ಪ್ರಸಿದ್ಧ ಅಸದಖಾನ ಲ್ಯಾರಿಯ ಮಗನು. ಶತಾಯುಷಿಯಾಗಿ ಮರಣಹೊಂದಿದ ಅಸದಖಾನ ಹಾಗೂ ಆತನ ಮಗನಿಗೆ ವಿಜಾಪುರದ ಇತಿಹಾಸವು ಚೆನ್ನಾಗಿ ಗೊತ್ತಿತ್ತು. ಈ ವಿಷಯವು ಎರಡನೆಯ ಅಲಿ ಆದಿಲಶಹನಿಗೂ ಆತನ ಕುಟುಂಬದ ಜನರಿಗೂ ಗೊತ್ತಿತ್ತು. ಅವರು

ಫಿತೂರಖಾನನಿಗೆ ಇತಿಹಾಸವನ್ನು ಬರೆಯಲು ಹೇಳಿದರು. ಅದರಂತೆ ಆತನು ತನಗೆ ನೆನಪಿದ್ದಷ್ಟನ್ನು ಬರೆಯಲು ತೊಡಗಿದನು. ಮೂಲತಃ ಇದನ್ನು ಅಸದಖಾನ ಲ್ಯಾರಿಯೇ ಬರೆದಿರಬೇಕೆಂಬ ಊಹೆಯೂ ಇದೆ. ಜುಬೇರಿಯ 'ಬುಸಾತಿನ–ಅಲ್–ಸಲಾತೀನ' ದಲ್ಲಿ ಬರುವ ಮೀರ್ ಇಬ್ರಾಹಿಮ್ ಅಸದಖಾನೀ ಎಂಬ ಹೆಸರೂ, ಇತರತ್ರ ಅವನ ಹೆಸರಿನಲ್ಲಿ ಬರುವ 'ಅಹವಾಲ ಸಲಾತೀನ ವಿಜಾಪುರ' ಎಂಬ ಗ್ರಂಥವು, 'ಹಫ್ತಿ–ಕುರ್ಸಿ' ಯ ಮೂಲ ರೂಪವಾಗಿರಬೇಕೆಂಬ ಅಭಿಪ್ರಾಯವೂ ಇದೆ. ಈ ಫಿತೂರಖಾನನೆಂಬವನು ಅನಂತರ ಬಂದವನಿರಬೇಕು. ಯಾಕೆಂದರೆ ಎರಡನೆಯ ಅಲಿ ಆದಿಲಶಹನ ಆಣತಿಯಂತೆ ಬರೆದ ಗ್ರಂಥವು ಅವನ ಕಾಲದವರೆಗೆ ಮಾತ್ರ ಇರಬೇಕಾಗಿತ್ತಷ್ಟೆ. ಆದರೆ ಔರಂಗಜೇಬನ ಅನಂತರವೂ ವಿಷಯ ಮುಂದುವರಿದಿದೆ. ಎರಡನೆಯ ಆಲಿ ಅದಿಲಶಹನ ಆಸ್ಥಾನದಲ್ಲಿ ರಚಿತಗೊಂಡ ಈ ಕೃತಿ ಔರಂಗಜೇಬನ ಮರಣಾನಂತರ ಪರಿಷ್ಕೃತವಾಗಿ ಮತ್ತೊಂದು ಆವೃತ್ತಿಯಾಗಿರಬೇಕು.[೧೩]

ಗ್ರಂಥದಲ್ಲಿ ಬಂದ ವಿಷಯಗಳ ಆಧಾರದಿಂದ ಅದನ್ನು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಒಂದು ಘಟನೆಗಳ ವರ್ಣನೆ, ಇನ್ನೊಂದು ಶಕಾವಲಿ ಅಥವಾ ವರುಷಾನುಕ್ರಮಣಿಕೆ. ವಿಜಾಪುರದ ಆದಿಲಶಾಹಿ ರಾಜ್ಯದ ಪ್ರತಿಯೊಬ್ಬ ಬಾದಶಹ ಹೇಗೆ ಪಟ್ಟಕ್ಕೆ ಬಂದದಿನಿಂದ ಆತನ ಮರಣದವರೆಗಿನ ಘಟನೆಗಳನ್ನು ತನ್ನ ಅಭಿಪ್ರಾಯಗಳೊಂದಿಗೆ ನಮೂದಿಸುತ್ತಾನೆ. ಈ ಮಧ್ಯಕಾಲದಲ್ಲಿ ನಡೆದ ಪ್ರಮುಖ ಘಟನೆಗಳು, ಕಟ್ಟಿದ ಪ್ರಮುಖ ಕಟ್ಟಡಗಳು, ಕೆರೆಗಳು, ಇತ್ಯಾದಿಗಳ ವರುಷಗಳನ್ನು ಪ್ರತ್ಯೇಕವಾಗಿ ನಮೂದಿಸುತ್ತಾನೆ.

ಗ್ರಂಥದಲ್ಲಿ ಬಂದ ವಿಷಯಗಳನ್ನು ಸ್ಥೂಲವಾಗಿ ಹೀಗೆ ಹೇಳಬಹುದು.

ಗ್ರಂಥದ ಉಪಕ್ರಮ, ಯುಸೂಫನ ಪೂರ್ವವೃತ್ತ, ಯುಸೂಫನ ಕಾಲದಲ್ಲಿಯ ಮಾಹಿತಿ, ಇಸ್ಮಾಯಿಲ್, ಮಲ್ಲೂ, ಮೊದಲ ಇಬ್ರಾಹಿಮ, ಮೊದಲ ಅಲಿ, ಎರಡನೆಯ ಇಬ್ರಾಹಿಮ, ಮಹಮ್ಮದ, ಎರಡನೆಯ ಅಲಿ ಆದಿಲಶಹರ ಕಾಲದಲ್ಲಿ ನಡೆದ ಘಟನೆಗಳ ಕಾಲಾನುಕ್ರಮದಲ್ಲಿ ವರ್ಣನೆ. ಸಿಕಂದರನ ಕಾಲದಲ್ಲಿ ರಾಜ್ಯ ಹೇಗೆ ಹೋಯಿತು, ಔರಂಗಜೇಬನ ಮರಣ, ಪ್ರತ್ಯೇಕ ಬಾದಶಹರ ವಯಸ್ಸು, ರಾಜ್ಯಭಾರಕಾಲ, ವಿಜಾಪುರದಲ್ಲಿರುವ ಬಜಾರುಗಳ ಹೆಸರುಗಳು, ಬಾವಿಗಳು, ಮಾಲಿಕ–ಇ–ಮೈದಾನ ತೋಫಿನ ವಿವರ ಇತ್ಯಾದಿಗಳು ಸೇರಿಕೊಂಡಿವೆ.

ಕಾಲಾನುಕ್ರಮದ ವರುಷಗಳಾಗಲೀ ಅವರ ಕಾಲದಲ್ಲಿ ಕಟ್ಟಿದ ಕಟ್ಟಡಗಳ ಉಲ್ಲೇಖವಾಗಲೀ ಎಲ್ಲವೂ ಖಚಿತವಾಗಿಯೇನೂ ಇಲ್ಲ. ಕೆಲವು ವರುಷಗಳು ತಪ್ಪು ಉಲ್ಲೇಖವಾಗಿದ್ದರೆ ಇನ್ನು ಕೆಲವು ಸಂದರ್ಭದಲ್ಲಿ ಯಾರೋ ಕಟ್ಟಿದ ಕಟ್ಟಡವನ್ನು ಇನ್ನಾರ ಕಾಲದಲ್ಲೋ ಕಟ್ಟಿದ್ದೆಂದು ನಮೂದಾಗಿರುವ ಪ್ರಸಂಗಗಳೂ ಉಂಟು.

**ಮಾದರಿ ಬರವಣಿಗೆ**

ಇಬ್ರಾಹಿಮನು (ಎರಡನೆಯ) ನಿಜವಾಗಿಯೂ ಜಗದ್ಗುರುವಾಗಿದ್ದನು. ಅವನಲ್ಲಿ ಕಾಶೀ ಧನಾಜೀ, ಯಮಾಜಿ, ದೇವರಾವ, ಮೋಹನದಾಸ, ಭಿಕಾಜಿ ಮತ್ತು

ಫರ್ನಾಲ್ಲೂಬ್ ಎಂಬವರು (ರಾಜ) ವೈದ್ಯರಾಗಿದ್ದರು.

ಅವನಲ್ಲಿ ೯೯೫ ಆನೆಗಳಿದ್ದುವು.

ಅವನಿಗೆ ೧೪೪೫ ಜನ ಶಿಷ್ಯರಿದ್ದರು.

ಇಬ್ರಾಹಿಮನಿಗೆ (ಎರಡನೆಯ) ಭಗಂದರ ಎಂಬ ಹೆಸರಿನ ರೋಗವಾಗಿತ್ತು. ಅನೇಕ ಜನ ವೈದ್ಯರು ನಾನಾ ತರದ ಉಪಾಯಗಳಿಂದ ಅವನನ್ನು ಉಪಚರಿಸಿದನು. ಆದರೂ ಭಗಂದರ ರೋಗ ಕಡಿಮೆಯಾಗಲಿಲ್ಲ. ಎಳೆಂಟು ತಿಂಗಳುಗಳು ಬೇನೆಯಲ್ಲಿಯೇ ಕಳೆದ ಅನಂತರ ಮೋಹರಮ್ ತಿಂಗಳ ೧೦ನೆಯ ದಿನ ಆತನು ಸತ್ತನು. ಆತನು ತನ್ನ ಜೀವಿತಕಾಲದಲ್ಲಿಯೇ ಜೋಹರಾಪುರದಲ್ಲಿ ರೋಜಾವನ್ನು ಕಟ್ಟಿಸಿಕೊಂಡಿದ್ದನು. ಅವನಿಗೆ ನಾಲ್ಕೈದು ಜನ ಹುಡುಗರಿದ್ದರು. ಅವರಲ್ಲಿ ಸುಲ್ತಾನ ಮಹ್ಮದನನ್ನು ತನ್ನ ನಜರಿನಲ್ಲಿಯೇ ಬೆಳೆಸಿದ್ದನು ಮತ್ತು ತನ್ನ ಸಿಂಹಾಸನದ ಹತ್ತಿರವೇ ಅವನನ್ನು ಕುಳ್ಳಿರಿಸಿಕೊಂಡಿರುತ್ತಿದ್ದನು. ಸಾಯುವಾಗ ಅವನನ್ನೆ ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಹೇಳಿದನು. ಅದರಂತೆ ಅವನು ಸತ್ತನಂತರ ಮಹ್ಮದನನ್ನೆ ಪಟ್ಟಕ್ಕೆ ಕುಳ್ಳಿರಿಸಿದರು. ರಾಜ್ಯಾಭಿಷೇಕದ ಕಾಲದಲ್ಲಿ ಸುಲ್ತಾನ ಮಹ್ಮದನಿಗೆ ೧೬ ವರುಷಗಳಾಗಿದ್ದುವು.

ಬಡೀ ಸಾಹಿಬಾ ಎಂಬವಳು ಕುತುಬಶಾಹನ ಮಗಳಾಗಿದ್ದು ಸುಲ್ತಾನ ಮಹ್ಮದನ ಹೆಂಡತಿಯಾಗಿದ್ದಳು. ಅಲಿ (ಎರಡನೆಯ) ಹುಟ್ಟಿದಾರಭ್ಯ ಅವನನ್ನು ತನ್ನ ಹತ್ತಿರವೇ ಇಟ್ಟುಕೊಂಡು ಆತನ ಪಾಲನ-ಪೋಷಣೆ ಮಾಡಿದ್ದಳು. ಅಲಿಗೆ ೪ ವರುಷ ೪ ತಿಂಗಳು ೪ ದಿನ ವಯಸ್ಸಾದಾಗ ಕಾಯ್ದೆ ಪ್ರಮಾಣದಂತೆ ಆತನನ್ನು ಶಾಲೆಗೆ ಕಳಿಸಿದರು. ಅಲ್ಲಿ ಅವನು ಬರೆವುದು ಓದುವುದು ಅರ್ಥ ಮಾಡಿಕೊಳ್ಳುವುದು, ವ್ಯಾಯಾಮ, ಕುದುರೆ ಓಡಿಸುವುದು, ಕತ್ತಿ ವರಸೆ ತೀರಂದಾಜಿ (ಬಿಲ್ಲುವಿದ್ಯೆ) ಮತ್ತು ಇತರ ಎಲ್ಲ ಕಲೆಗಳಲ್ಲಿ ನಿಷ್ಣಾತನಾದನು. ಸುಲ್ತಾನ ಮಹ್ಮದನು ಸತ್ತ ಅನಂತರ ಎಲ್ಲ ಮುಖಂಡರು ಸೇರಿ ಸುಮುಹೂರ್ತವನ್ನು ನೋಡಿ ಮೊಹರಮ್‌ದ ೧೬ನೆಯ ದಿನ ಮಂಗಳವಾರ ದಿನ ಅಲಿ ಆದಿಲಶಹನನ್ನು ಪಟ್ಟಕ್ಕೆ ಕುಳ್ಳಿರಿಸಿದರು. ಅದು ಹಿಜರಿಸನ್ ೧೦೬೭ ಆಗಿತ್ತು.

## ವಿಜಾಪುರ ಬಾದಶಹರು ಆಳಿದ ಕಾಲ

ಯುಸುಫ ೨೨ ವರುಷ ೭ ತಿಂಗಳು ೨ ದಿನ ಸನ್ ೮೯೫ ರಿಂದ ೯೧೮ (ಫಸಲಿ)

ಸನ್ ೯೦೮ ರಿಂದ ೯೧೪ (ಹಿಜರಿ). (ಇದು ೯೩೦ ಆಗಬೇಕು) ಹೀಗೆ ಎಲ್ಲ ಬಾದಶಹ ಕಾಲವನ್ನು ಕೊಟ್ಟಿದ್ದಾನೆ.

## ವಿಜಾಪುರ ಕೋಟೆಯ ಒಳಗಿನ ಬಜಾರುಗಳು

ಪಾದಶಾಹಪುರ, ಶಾಹಪೇಠ, ಫರಹಾನೀ ಪೇಠ, ಬಾರಾ ಖುದಾ ಬಜಾರ, ಪಾಲೇ ಬಜಾರ, ಹೈದರ ಬಾಜಾರ, ದಲೀಲ ಖಾನ ಬಜಾರ, ಮುಹಮ್ಮದಶಾಹೀ ಬಜಾರ, ಆಹನಗರ ಬಜಾರ, ಮುರಾದಖಾನ ಬಜಾರ, ಕಮಾಲಖಾನ ಬಜಾರ, ರಿತೇ ಖಂಡೀ ಬಜಾರ, ಫಾತಿಮಾ ಬಜಾರ, ಕಾರಂಜೀ ಬಜಾರ, ಸಫಾ ಬಜಾರ, ಮೀರಕಾಯೆ ಬಜಾರ, ಠಾಣೆ ಬಜಾರ, ರಾವಬಜಾರ, ಮಸಜಿದ ಬಜಾರ, ಶಾಹಮುರ್ತಜಾ ಬಜಾರ,

ದೌಲತಬಜಾರ, ಕಾಲೇಬಾವಾ ಬಜಾರ, ಮಲಿಮೂರ ಬಜಾರ, ಜಗತೀ ಬಜಾರ, ಶಿಖಾರಖಾನೆ ಬಜಾರ, ಠಾಣೆ ಖಾರ, ಮೀರಕಾಯಿ ಖಾರ, ಫರೀದಖಾನ ಬಜಾರ, ಝುಂಗೀ ಮಸಜಿದ, ರೂಮೀ ಖಾನ ಬಜಾರ, ಮುಬಾರಕ ಬಜಾರ, ನಾಗಠಾಣೆ ಬಜಾರ.

### ಕೋಟೆಯ ಹೊರಗಿನ ಬಜಾರುಗಳು

ಪಾದಶಾಹಪುರ ಉರ್ಫ ಶಾಹಪುರ, ಜೋಹರಾಪುರ ಉರ್ಫ್ ಅಜೀಜಪುರ, ಖುದಾವಂದಪುರ, ಅಫಜಲಪುರ, ಸಿಕಂದರಪುರ, ಫತಹಗಂಜ, ಯಾಕೂತಪುರ, ತಾಂಬೇಖಾನೆ ಬಜಾರ, ಖರೀದೀ ಬಜಾರ, ಆಲಮ್ ಗೀರ – ಶಾರ್ಜಾಪುರ, ಅಬದುಲ್ಲಾ ಪುರ, ಉಫ್ಜುಲ್ಲಾಹಪುರ, ಇಬ್ರಾಹಿಮಪುರ, ತಹಬ್ಬುರಪುರ, ಸಲಾಬತಪುರ, ಯಾರ ಆಲೀಪುರ, ದಿಯಾನತಪುರ, ಗಾಝೀಉದ್ದೀನಪುರ, ಶಾಹಗಂಜ, ಗಂಜೆ ಸುಲತಾನೀ, ಬೆನಕುಲೀಜಖಾನ ಬಾಜಾರ, ಸಯ್ಯಾದ ನಿಯಾಜಖಾನ ಬಜಾರ, ರಿಕಾಬ ತಾತಿಯಹಖಾನ ಬಾಜಾರ, ರಸೂಲಪುರ.

೧೪೦೦ ಬಾವಿಗಳಿದ್ದು ತಾಜಬಾವಡಿ ದೊಡ್ಡದಿದ್ದು, ಉಳಿದವು ಅದಕ್ಕಿಂತ ಚಿಕ್ಕದಾಗಿವೆ.[೧೩]

### ೩.೧.೭ ತಮ್ಮಣ್ಣಾ ಭಟ್ಟ ದೈವಜ್ಞನ ದಖಣೆ ಪಾದಶಹರ ಸಂಸ್ಕೃತ ಇತಿಹಾಸ

ಎರಡನೆಯ ಅಲಿ ಆದಿಲಶಹನ ಆಸ್ಥಾನ ಜ್ಯೋತಿಷಿಯಾಗಿದ್ದ ತಮ್ಮಣ್ಣಾ ಭಟ್ಟ ದೈವಜ್ಞನು ಸಂಸ್ಕೃತದಲ್ಲಿ ಸಂಕ್ಷಿಪ್ತವಾಗಿ ದಖಣೆ ಪಾದಶಹರ ಚರಿತ್ರೆಯನ್ನು ಬರೆಯುವುದಾಗಿ ಹೇಳಿಕೊಳ್ಳುತ್ತ, ವಿಜಾಪುರದ ಆದಿಲಶಾಹಿಗಳ ಎಲ್ಲ ಒಂಬತ್ತು ಬಾದಶಹರ ರಾಜ್ಯಾರೋಹಣ, ಮರಣ ಕಾಲ ಹಾಗೂ ಅವರ ಕಾಲದಲ್ಲಿ ಕಟ್ಟಿದ ಕಟ್ಟಡಗಳ ವಿವರಗಳನ್ನು ಹಿಂದು ಕಾಲಮಾನ ಪದ್ಧತಿಯಲ್ಲಿ ಕೊಟ್ಟಿದ್ದಾನೆ. ಅದು ಹೀಗೆ ಪ್ರಾರಂಭವಾಗುತ್ತದೆ:

> ಶ್ರೀ ಗಣೇಶಾಯ ನಮಃ ॥ ಶ್ರೀಮಚ್ಚಂದ್ರಲಾ ಪರಮೇಶ್ವರ್ಯ ನಮಃ ॥ ಅಥ ಸಂಕ್ಷೇಪೇಣ ದಖಣೇ ಪಾತಶಾಹಾನಾಂ ವಿಸ್ತಾರಃ ॥ ಭೂಖೇಂದ್ರ ೧೪೦೧ ಪ್ರಮಿತೆ ಶಕೆ ವಿಕಾರಿನಾಮ್ನಿ ಸಂವತರೆ ॥ ಆಷಾಢ ಕೃಷ್ಣ ಪಕ್ಷೇತು ಚ ಸಪ್ತಮ್ಯಾಂ ಭಾನುವಾಸರೇ॥ ನಕ್ಷತ್ರೋತ್ತರ ಭಾಧ್ರೇಚ ಜ ಕೀ ವೇಲಾ ಸುಶೋಭನೆ ॥ ಸುಲತಾನ ಮಹಾ ವಲ್ಲೀ ಪಾತಶಾಹ ನಿದೇಶತಃ ಖೋಜೇಜಹಾ ವಜೀರೇಣ ಕಿಲ್ಲಾ ಪ್ರಾರಂಭಣಾಂ ಕೃತಂ ॥ ತತಃ ಕತಿಪಯ ದಿವಸಾನಂತರ ಶ್ರೀ ಶಕೆ ೧೪೦೭ ವಿಶ್ವಾವಸು ವರ್ಷ ಶ್ರಾವಣ ಕೃಷ್ಮ ಸಪ್ತಮ್ಯಾಂ ಭೌಮವಾಸರೇ ಈಸೂಪಖಾನಶ್ಚ ತುರಂಗ ಸೈನ್ಯ ಸಹಿತಃ ಶಹರಂ ಗೃಹೀತವಾನ್ ॥ ತದಾ ಯಾವನ ಶಕಂ ೮೯೫ ದಖಣೇ ಪಾತಾಶಾಹಸ್ಯ ಮೂಲಂ ಈಸೂಪ ಏವ ॥೧॥ ತಸ್ಯ ರಾಜ್ಯ ಪ್ರಮಾಣೆ ವರ್ಷ ೨೨ ಮಾಸ ೭ ದಿನ ೨ ಸನ್ ೮೯೫ ॥೨॥

ಹೀಗೆ ಸಿಕಂದರ ಆದಿಲಶಹನವರೆಗೂ ಹೇಳುತ್ತ ಮಧ್ಯ ಅವರು ಕಟ್ಟಿದ ಕಟ್ಟಡಗಳ ವಿವರಗಳನ್ನು ಕೊಡುತ್ತಾನೆ. ಕೆಲವೊಮ್ಮೆ ಅವು ಸರಿಯಾಗಿ ನಮೂದಾಗಿಲ್ಲ. ತನ್ನ ಹಾಗೂ ಬಾದಶಹನ ಸಂಪರ್ಕ, ತನ್ನ ಜ್ಯೋತಿಷ್ಯದ ಮಹಾತ್ಮೆಯನ್ನು ಹೇಳಿಕೊಂಡಿದ್ದಾನೆ. ವಿಜಾಪುರ

ಪತನವಾದ ಅನಂತರ ಮೊಗಲ ಬಾದಶಹ ಔರಂಗಜೇಬನು ನಗರ ಪ್ರವೇಶ ಮಾಡಿದ್ದನ್ನು, ಅನಂತ ತನ್ನನ್ನು, ರುಕ್ಮಾಂಗದ ಪಂಡಿತ ಹಾಗೂ ಕಾರಭಾರಿ ಮಹಿಪತರಾಯನನ್ನು ಔರಂಗಜೇಬನು ದರಬಾರಕ್ಕೆ ಕರೆ ಕಳಿಸಿದನು. ಹಾಗೂ ಔರಂಗಜೇಬನು ತನ್ನ ಹಾಗೂ ತನ್ನ ಮಕ್ಕಳ ಬಗ್ಗೆ ಜ್ಯೋತಿಷವನ್ನು ಕೇಳಿದ್ದನ್ನು ದಾಖಲಿಸಿದ್ದಾನೆ. ಆತನಿಗೆ ತಮ್ಮಣ್ಣ ಭಟ್ಟನು ಅವನ ರಾಜ್ಯ ಭಾರತದ ನಿಖರ ವರುಷಗಳನ್ನು ಹೇಳುವುದಲ್ಲದೆ, ಅವನ ಆಯುಷ್ಯವನ್ನೂ ಹೇಳಿದ್ದನ್ನು ನಿರೂಪಿಸಿದ್ದಾನೆ.[೯]

## ೩.೨ ಕಥನ ಕಾವ್ಯ ಕೃತಿಗಳು

ಪರ್ಶಿಯನ್ ಸಾಹಿತ್ಯದಲ್ಲಿ ಮಸ್ನವಿಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. 'ಮಸ್ನವಿ' ಎಂದರೆ ಕಥನ ಕಾವ್ಯಗಳು ಎಂದು ಹೇಳಬಹುದು. ಕಥೆ ಯಾವುದೂ ಆದೀತು ಪ್ರೇಮ, ಯುದ್ಧ, ಚರಿತ್ರೆ, ಇತ್ಯಾದಿಗಳನ್ನೊಳಗೊಂಡ ಕಥನ ಕಾವ್ಯಗಳು ಮಸ್ನವಿ ಎನಿಸುತ್ತವೆ. ಪರ್ಶಿಯನ್ ಸಾಹಿತ್ಯದ ಈ ರೂಪ ಬಹಮನಿ ಹಾಗೂ ಶಾಹಿ ರಾಜ್ಯಗಳಲ್ಲಿ ದಖಣೀ ಭಾಷೆಯಲ್ಲೂ ಬಂದಿತು. ಅದು ಇಲ್ಲಿ ತುಂಬ ಯಶಸ್ವಿಯಾಗಿ ನೂರಕ್ಕೂ ಅಧಿಕ ದಖಣಿ ಮಸ್ನವಿಗಳನ್ನು ಸೃಷ್ಟಿಸಲು ಕಾರಣವಾಯಿತು. ಈ ಯಶಸ್ಸಿಗೆ ಆದಿಲಶಾಹಿ ಆಸ್ಥಾನದ ಕವಿಗಳು ಬಹು ಮುಖ್ಯ ಕಾರಣರಾಗಿ, ದಖಣಿ ಭಾಷೆಯನ್ನು ವಿಶ್ವ ಸಾಹಿತ್ಯದ ಮಾಲಿಕೆಯಲ್ಲಿ ಸೇರಿಸಿದ್ದು ವಿಶೇಷವಾಗಿದೆ.

ಎರಡನೆಯ ಇಬ್ರಾಹಿಮ ಆದಿಲಶಹನು ತಾನು ಸ್ವತಃ ದಖಣಿ ಭಾಷೆಯಲ್ಲಿ 'ಕಿತಾಬ-ಇ-ನೌರಸ' ಕಾವ್ಯವನ್ನು ಬರೆದನು. ಆತನ ಆಸ್ಥಾನ ಕವಿ ಅಬ್ದುಲ್ಲಾ ದೇಹಲವಿಯು 'ಇಬ್ರಾಹಿಮ ನಾಮಾ' ಎಂಬ ಕಾವ್ಯವನ್ನು ರಚಿಸಿದನು. ಆತನ ಆಸ್ಥಾನದಲ್ಲಿಯೇ ಇದ್ದ ಅಮೀನ ಎಂಬ ಕವಿಯ 'ಬಹರಾಮ ವ ಹುಸ್ನಬಾನು' ಎಂಬ ಅಪೂರ್ಣ ಪ್ರೇಮಕಾವ್ಯವನ್ನು ದೌಲತ ಎಂಬ ಕವಿ ಪೂರ್ಣಗೊಳಿಸಿದನು. ಇನ್ನೊಬ್ಬ, ಕವಿ ಮುಕೀಮಿಯು 'ಚಂದ್ರಬದನ ವ ಮಾಹಿಯಾರ' ಎಂಬ ಸುಂದರ ಪ್ರೇಮ ಕಾವ್ಯವನ್ನು ರಚಿಸಿದನು. ಮಹಮ್ಮದ ಆದಿಲಶಹನ ಆಸ್ಥಾನದಲ್ಲಿದ್ದ ಕವಿ ಸುನಅತಿಯು 'ಕಿಸ್ಸಾಯೆ ಬೇನಜೀರ' ಎಂಬ ಕಥಾಕಾವ್ಯವನ್ನು ರಚಿಸಿದ್ದಾರೆ, ಖುಶನೂದನು ಹಸ್ತ-ಬಹಿಶ್ತ ಎಂಬ ಕಾವ್ಯವನ್ನು, ರುಸ್ತುಮಿಯು 'ಖಾವರ ನಾಮಾ' ಕಾವ್ಯವನ್ನು ರಚಿಸಿದ್ದಾನೆ.

ಎರಡನೆಯ ಅಲಿ ಆದಿಲಶಹ ತಾನು ಸ್ವತಃ ಕವಿಯಾಗಿದ್ದ. ಆತನ ಒಂದು ಕವನ ಸಂಗ್ರಹವೂ ಇದೆ. ಆತನ ಆಸ್ಥಾನದ ಮುಲ್ಲಾ ನುಸ್ರತಿಯು ಮಹಾಕವಿ ಎನಿಸಿದ್ದಾನೆ. ಅವನು 'ಗುಲ್ಶನೆ ಇಶ್ಕ' 'ಅಲೀ ನಾಮಾ' ಹಾಗೂ 'ತಾರೀಖೆ ಇಸ್ಕಂದರಿ' ಅಲ್ಲದೆ ಇನ್ನೂ ಒಂಭತ್ತು ಕಥನ ಕಾವ್ಯಗಳನ್ನು ರಚಿಸಿದ್ದಾನೆ. ಅವನ ಆಸ್ಥಾನದ ಇನ್ನೊಬ್ಬ ಕವಿ ಹಾಶಿಮಿಯು 'ಯುಸೂಫ ಜುಲೈಖಾ' ಎಂಬ ಕಥನ ಕಾವ್ಯವನ್ನು ರಚಿಸಿದ್ದಾನೆ.

ಸದ್ಯಕ್ಕೆ ಇಲ್ಲಿ ಐದು ಕೃತಿಗಳನ್ನು ಮಾತ್ರ ಪರಿಚಯಿಸಲಾಗಿದೆ.

### ೩.೨.೧ ಕಿತಾಬೆ-ನೌರಸ

'ಕಿತಾಬೆ ನೌರಸ' ಅಥವ 'ಕಿತಾಬ-ಇ-ನೌರಸ' ಎಂಬುದು ಎರಡನೆಯ ಇಬ್ರಾಹಿಮ ಆದಿಲಶಹನು (ಕ್ರಿ. ಶ. ೧೫೮೦-೧೬೨೬) ಬರೆದ ದಖಣಿ ಭಾಷೆಯ

ಗೀತೆಗಳ ಸಂಕಲನ. ಇದರಲ್ಲಿ ೫೬ ಗೀತಗಳೂ, ೧೭ ದೋಹ್ರಾ (ದ್ವಿಪದಿ)ಗಳೂ ಇವೆ. ಭಾರತೀಯ ಉತ್ತರಾದಿ ಅಥವ ಹಿಂದುಸ್ತಾನಿ ಸಂಗೀತದ ಕುರಿತಾಗಿ ಬರೆದ ಕವನಗಳ ಸಂಕಲನ ಎಂಬುದು ವಿದ್ವಾಂಸರ ಮತವಾಗಿದೆ. ಆದರೆ ಇದರಲ್ಲಿ ಇಬ್ರಾಹಿಮನು ತನ್ನ ಗೀತೆಗಳಿಗೆ ರಾಗಗಳನ್ನು ಸೂಚಿಸಿದ್ದಾನೆಯೇ ಹೊರತು ಲಕ್ಷಣಗಳನ್ನೇನೂ ಹೇಳಿಲ್ಲ. ಅವನು ಆಗಾಗ ತನ್ನ ಜೀವಿತ ಕಾಲದಲ್ಲಿ ಬರೆದನು. ಆದ್ದರಿಂದ ಇವು ಒಂದು ವಿಷಯ ಅಥವಾ ಕಥಾ ವಿಷಯಗಳನ್ನೊಳಗೊಂಡ ಗೀತೆಗಳೂ ಆಗಲಿಲ್ಲ. ಗೀತೆಗಳಿಗೆ ಒಟ್ಟು ೧೭ ರಾಗಗಳನ್ನು ಸೂಚಿಸಿದ್ದಾನೆ. ಅವುಗಳ ವಿವರ ಹೀಗಿದೆ.

| | | | |
|---|---|---|---|
| ರಾಗ | ಭೂಪಾಳಿ–೨ | ರಾಮಕಲಿ (ರಾಮಕಿರಿ)–೨ | ಭೈರವ–೬ |
| | ಮಾರೂ–೨ | ಆಸಾವರಿ–೨ | ದೇಶೀ–೧ |
| | ಪೂರಬಾ–೧ | ತೋಡೀ–೪ | ಮಲ್ಹಾರ–೫ |
| | ಗೌರಿ–೨ | ಕಲ್ಯಾಣ–೪ | ಧನಾಶ್ರೀ–೨ |
| | ಕಾನಡಾ–೧೯ | ಕೇದಾರ–೪ | ಹಜೀಜ–೧ |
| | ಬರಾಡಿ–೧ | ಹಾಗೂ | ನೌರೋಜ–೧ |

ಹೀಗೆ ಸೂಚಿಸಿದ ೧೭ ರಾಗಗಳಲ್ಲಿ ಹಜೀಜ, ಬರಾಡಿ ಮತ್ತು ನೌರೋಜ ರಾಗಗಳು ಇಂದು ಪ್ರಚಲಿತದಲ್ಲಿಲ್ಲ. ಬಹುಶಃ ಇವು ಅವನೇ ರಚಿಸಿದ ಅಥವ ಸಮಕಾಲೀನ ಸಂಗೀತಗಾರರು ರಚಿಸಿದ ರಾಗಗಳಾಗಿರಬೇಕು.

ಇಬ್ರಾಹೀಮನು ಇವುಗಳಲ್ಲಿ ಗೀತೆಗಳನ್ನು ಮೂರು ಭಾಗಗಳಲ್ಲಿ ವಿಗಂಡಿಸಿದ್ದಾನೆ. ಮೊದಲು ನೌರಸ ಅಥವಾ ಇಂದು ಪ್ರಚಲಿತದಲ್ಲಿರುವ ಧ್ರುವಪದ: ಅನಂತರ ಬೈನ ಅಥವ ಅಂತರಾ: ಕೊನೆಯದು ಅಭೋಗ–ಹೀಗೆ ವಿಂಗಡಿಸಿದ ಕೆಲವು ಗೀತಗಳಲ್ಲಿ ಒಂದಕ್ಕಿಂತ ಅಧಿಕ ಬೈನಗಳೂ ಉಂಟು.

ಆಸ್ಥಾನ ಕವಿ ಜಹೂರಿಯು ಈ ಕವನ ಸಂಕಲನಕ್ಕೆ ಒಂದು ಮುನ್ನುಡಿಯನ್ನೂ ಬರೆದಿದ್ದಾನೆ. ಅದು ಪರ್ಶಿಯನ್ ಭಾಷೆಯಲ್ಲಿದೆ. ಆತನು ಹೇಳಿದಂತೆ ಇಬ್ರಾಹೀಮನು ಪರ್ಶಿಯನ್ ಜನರಿಗೆ ಭಾರತೀಯ ಸೌಂದರ್ಯ ಶಾಸ್ತ್ರ ಹಾಗೂ ನವರಸಗಳನ್ನು ಪರಿಚಯಿಸಲು 'ಕಿತಾಬೆ–ನೌರಸ' ಬರೆದನಂತೆ. ಶೃಂಗಾರ, ವೀರ, ಭೀಭತ್ಸ, ರುದ್ರ, ಭಯಾನಕ ಹಾಸ್ಯ, ಕರುಣ, ಅದ್ಭುತ ಮತ್ತು ಶಾಂತಿ ಇವುಗಳೇ ಒಂಭತ್ತು ರಸಗಳು. ಇವುಗಳಲ್ಲಿ ಇಬ್ರಾಹೀಮನು ಶೃಂಗಾರಕ್ಕೆ ಅಧಿಕ ಒತ್ತು ಕೊಟ್ಟಿದ್ದಾನೆ. ಕೆಲವು ಸಂದರ್ಭಗಳಲ್ಲಿ ಹಾಸ್ಯ ಕರುಣ ಹಾಗೂ ಶಾಂತಿಗಳಿಗೂ ಆಸ್ಪದ ಕೊಟ್ಟಿದ್ದಾನೆ. ಈ ರಾಗಗಳನ್ನು ಧ್ರುಪದ ಶೈಲಿಯಲ್ಲಿ ಸಂಯೋಜಿಸಿದ್ದಾನೆಂದೂ ವಿದ್ವಾಂಸರ ಮತವಾಗಿದೆ.

ಇಬ್ರಾಹಿಮನು ಭಾರತದ ಪುರಾಣಗಳನ್ನು ಓದಿರಬಹುದು ಅಥವ ಕೇಳಿರಬಹುದು. ಸೌಂದರ್ಯಶಾಸ್ತ್ರ ಹಾಗೂ ನವರಸಗಳನ್ನು ಪರಿಚಯಿಸುವಾಗ ಸಹಜವಾಗಿ ಆತನ ಮನಸ್ಸು ಭಾರತೀಯರ ವಿದ್ಯಾದೇವತೆಯಾದ ಸರಸ್ವತಿಯುತ್ತ ಒಲಿದಿದೆ. ಅಂತೆಯೇ ಮುಸಲ್ಮಾನರ ಸಂಪ್ರದಾಯದಂತೆ 'ಬಿಸ್ಮಿಲ್ಲಾಹ' ದಿಂದ ಪ್ರಾರಂಭಿಸಬೇಕಿದ್ದ 'ಕಿತಾಬೆ–ನೌರಸ' ಕವನ

ಸಂಕಲನವು ಸರಸ್ವತಿಯ ಆವಾಹನದಿಂದ ಪ್ರಾರಂಭವಾಗಿದೆ. ಸಂಕಲನದ ಮೊದಲ ದ್ವಿಪದಿಯು ಸರಸ್ವತಿಯನ್ನು ಕುರಿತಾಗಿದೆ.

'ನೌರಸ ಸೂರ ಜುಗ ಜಗಜೋತಿ ಆಣು ಸರೋಗುನಿ ।
ಯೂ ಸತ್ ಸರಸುತೀ ಮಾತಾ ಇಬ್ರಾಹಿಮ ಪರಸಾದ ಭ ಈ ದೂನೀ' ॥

('ಹೇ ತಾಯಿ ಸರಸ್ವತಿ ಇಬ್ರಾಹಿಮನ ಮೇಲೆ ನಿನ್ನ ಕೃಪೆ ಇರಲಿ, ನಿನ್ನ ಕೃಪೆಯಿಂದ ಆತನ ನವರಸ ಕಾವ್ಯವು ಜಗತ್ತಿನಲ್ಲಿ ಬಹುಕಾಲ ಬಾಳುತ್ತದೆ.')

'ಕಿತಾಬೆ-ನೌರಸ'ದಲ್ಲಿ ಬಂದ ೫೯ ಗೀತಗಳನ್ನು ಹಾಗೂ ೧೭ ದ್ವಿಪದಿಗಳನ್ನು ವಿಷಯಗಳಿಗೆ ಅನುಗುಣವಾಗಿ ಐದು ವಿಭಾಗಗಳಲ್ಲಿ ಹೀಗೆ ಗುರುತಿಸಬಹುದಾಗಿದೆ:

೧ ಹಿಂದು ದೇವ-ದೇವತೆಗಳ ಸ್ತುತಿ.

೨ ಕಲಬುರ್ಗಿಯ ಸಂತ ಬಂದಾ ನವಾಜರ ಸ್ತುತಿ.

೩ ತಾನು, ತನ್ನ ತಂಬೂರಿ ಮೋತೀಖಾನ, ಆನೆ ಆತಿಶ್‌ಖಾನ, ತನ್ನ ಹೆಂಡತಿ ಚಾಂದಸುಲ್ತಾನಳು ಹಾಗೂ ತಾಯಿ ಬಡೀ ಸಾಹೇಬಾಳ ಕುರಿತಾದ ಪದ್ಯಗಳು

೪ ಕಾಲ್ಪನಿಕ ವಿರಹ, ಶೃಂಗಾರ ಗೀತೆಗಳು

೫ ರಾಗ ಮಾಲಿಕೆ.

ಹಿಂದು ದೇವ-ದೇವತೆಗಳಲ್ಲಿ ಸರಸ್ವತಿ ಗಣಪತಿಯರಿಗೆ ವಿಶೇಷ ಆದ್ಯತೆಯಾಗಿದ್ದರೆ, ಶಿವನ ಕುರಿತಾಗಿಯೂ ಬರೆದಿದ್ದಾನೆ.

'ಲೇವ್ರೋ ಶುಭ ನಾಮ ಸಿರಿ ಸರಸತಿಕೊ ತಬ ಪಾಯೋ
ಜಸ ನವರಸ ಸರಸ ಸಂಗ ?
ಇಬ್ರಾಹಿಮ ಕರ್ಣ ಗಹತ ದಂಡವತ ಕರತ ತಬ
ಹೋತ ರೋಮ ರೋಮ ಭಯೋ ಉಮಂಗ' ॥

ಎಂದು ಒಂದೆಡೆ ಹೇಳಿದರೆ, ಇನ್ನೊಂದೆಡೆ ಶಾರದೆ ಹಾಗೂ ಗಣಪತಿಯರು ತಾಯಿ-ತಂದೆಯೆಂದು ಸ್ತುತಿಸಿದ್ದಾನೆ.

'ಶಾರದಾ ಗಣೇಶ ಮಾತಾ ಪಿತಾ ತುಮ ಮಾನೋ
ನಿರ್ಮಲ ಬಿಂಬ ಸ್ಪಟಿಕ ತೀಸೀ ತಾಶ ।
ಇಬ್ರಾಹಿಮ ಗುಪಿತ ಗಹೀಸೂ ಆಬ ನವಾಜ ಪರಗಟ
ಕೀನೋ ಧನ್ಯ ಮೇರೋ ರಾಸ' ॥

ಹೀಗೆ ಸುಮಾರು ಏಳೆಂಟು ಗೀತೆಗಳು ಸರಸ್ವತಿ, ಗಣಪತಿ ಮತ್ತು ಶಿವನ ಕುರಿತಾಗಿದ್ದರೆ, ಮೂರು ಗೀತಗಳಲ್ಲಿ ಇಬ್ರಾಹಿಮನು ಕಲಬುರ್ಗಿಯ ಸಂತ ಬಂದಾ ನವಾಜರನ್ನು ಸ್ತುತಿಸಿದ್ದಾನೆ.

'ಹಜರತ ಮುಹಮ್ಮದ ಜಗತ್ತರ ಗುರ ಗುಸಾಯಿ
ತುವ ದರಗಹ ಚಮಕ ಮೇರೋ ಮನಸಾರ'

(ಹಜರತ ಮುಹಮ್ಮದ ಗೇಸೂ ದರಾಜರು ಜಗತ್ತಿನ ಗುರುಗಳು, ಅವರ ಸಮಾಧಿಯು ಇಬ್ರಾಹಿಮನ ಮನಸ್ಸನ್ನು ಚುಂಬಕದಂತೆ ಎಳೆಯುತ್ತದೆ.)

'ಕಿತಾಬೆ-ನೌರಸ' ಒಂದು ಕವನ ಸಂಗ್ರಹವಾಗಿದ್ದರೂ, ಅದರಲ್ಲಿ ಇಬ್ರಾಹಿಮನು ತನ್ನ ಕುರಿತು, ತನ್ನ ಹೆಂಡತಿ ಚಾಂದ ಸುಲ್ತಾನಳ ಕುರಿತು, ತನ್ನ ತಾಯಿ ಬಡೀ ಸಾಹಿಬಾಳ ಕುರಿತು, ತನ್ನ ಆನೆ, ತಂಬೂರಿ, ತಾನು ವಾಸಿಸುವ ಏಳು ಅಂತಸ್ತಿನ ಸಾತ ಮಜಲಿ ಕಟ್ಟಡ ಹಾಗೂ ತಾನೆ ಕಟ್ಟಿಸಿದ ನವರಸ ಪುರ ಪಟ್ಟಣಗಳ ಕುರಿತು ಹಲವಾರು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಇಬ್ರಾಹಿಮನು ತನ್ನ ಕುರಿತು ಅಲ್ಲಲ್ಲಿ ಹೇಳಿರುವನಾದರೂ ಮೂರು ಗೀತಗಳಲ್ಲಿ ತನ್ನ ಸ್ಪಷ್ಟ ಚಿತ್ರವನ್ನು ಕೊಡುತ್ತಾನೆ.

'ಏಕ ಕರ ದಂಡೀ ವಾದನ ದೂಜೆ ಪಾನೀ ಪುಸ್ತಕ ಪೇಖತ
ನೌರಸ ಗಾವತ ಉತಪತಿ'

(ಒಂದು ಹಸ್ತದಲ್ಲಿ ಬಾರಿಸಲು 'ದಂಡೀ' ವಾದ್ಯವಿದೆ. ಇನ್ನೊಂದು ಕೈಯಲ್ಲಿ ಪುಸ್ತಕವಿದೆ. ಅದನ್ನು ನೋಡುತ್ತ ಇಬ್ರಾಹಿಮನು ನವರಸಗಳ ಉತ್ಪತ್ತಿಯಾಗುವಂಥ ಗೀತಗಳನ್ನು ಹಾಡುತ್ತಾನೆ.)

'ಕೇಸರೀ ವಸ್ತ್ರ ದಸನ ಶಾಮ ನಖ ಲಲಾಈ ಮಿಹಂದೀ ಗುನೀ ಪಿರತೀ'

(ಕೇಸರಿ ವಸ್ತ್ರಗಳನ್ನು ಧರಿಸಿದ್ದಾನೆ. ಹಲ್ಲುಗಳು ಶಾಮ ವರ್ಣದವುಗಳು, ಉಗುರುಗಳಿಗೆ ಮೆಹಂದಿ ಹಚ್ಚಿದೆ. ಗುಣೀ ಜನರೆಂದರೆ ಅವನಿಗೆ ತುಂಬ ಪ್ರೀತಿ ಇದೆ.)

ಕಂಠ ಥಾಲ ಫಟಿಕ ಜಪಮಾಲ ।
ನಗರ ವಿದ್ಯಾಪುರೀ ವಾಹನ ಹತ್ತೀ ।
ಇಬ್ರಾಹಿಮ ಕೋ ಗೋತ ಪಿತಾದೇವ ।
ಗುರು ಗಣಪತಿ ಮಾತಾ ಪವಿತ್ತರ ಸರಸುತಿ ॥

(ಕಂಠದಲ್ಲಿ ಉತ್ತಮ ಸ್ಫಟಿಕಗಳ ಜಪಮಾಲೆ ಇದೆ. ಇರುವ ಸ್ಥಳ ವಿದ್ಯಾಪುರ (ವಿಜಾಪುರ), ವಾಹನವು ಆನೆ, ಇಬ್ರಾಹಿಮನ ಸಂಬಂಧಿಗಳೆಂದರೆ ತಂದೆಯಾದವನು ದೇವ ಗುರು ಗಣಪತಿಯು ತಾಯಿ ಪವಿತ್ರಳಾದ ಸರಸ್ವತಿ) ಹೀಗೆ ತನ್ನ ಪರಿಚಯ ಹೇಳುತ್ತ ಮತ್ತೆ ಕೆಲವು ಗೀತಗಳಲ್ಲಿ ತನ್ನ ದೈನಂದಿನ ಚಟುವಟಿಕೆ (ಕಾರ್ಯಕ್ರಮ)ಗಳ ಕುರಿತು ವಿವರಿಸುತ್ತಾನೆ. ಹಾಗೆಯೇ ತನ್ನ ಹೆಂಡತಿಯ ಕುರಿತು ಐದು ಗೀತಗಳಲ್ಲಿ ಹೇಳಿದ್ದಾನೆ. ತಾಯಿ, ತಾನು ವಾಸಿಸುವ ಸಾತ ಮಂಜಿಲ, ತನ್ನ ವಾಹನ ಅತಿಶಖಾನ ಆನೆ, ಬಾರಿಸುವ ಮೋತೀಖಾನ ತಂಬೂರಿ ಕುರಿತಾಗಿಯೂ ಹೇಳಿದ್ದಾನೆ.

ಕವಿಗಳಿಗೆ ಶೃಂಗಾರ ಹಾಗೂ ವಿರಹಗಳು ಪ್ರಿಯವಾದ ವಿಷಯಗಳು ಇಬ್ರಾಹಿಮನೂ ಇದಕ್ಕೆ ಹೊರತಾಗಿಲ್ಲ. ಇಂಥ ವಿಷಯಗಳ ಗೀತಗಳನ್ನು ಬರೆಯುವಾಗ ಕವಿಗೆ ಕಲ್ಪನಾ

ಸ್ವಾತಂತ್ರ್ಯವಿರುತ್ತದೆ. ಆ ಸ್ವಾತಂತ್ರ್ಯವನ್ನು ಇಬ್ರಾಹಿಮನು ಚೆನ್ನಾಗಿಯೇ ಉಪಯೋಗಿಸಿಕೊಂಡಿದ್ದಾನೆ. ಕೆಲವು ಕಡೆಗೆ ಉತ್ತಮ ಕವಿಯ ಲಕ್ಷಣಗಳನ್ನೂ ತೋರಿಸಿದ್ದಾನೆ.

ಇಬ್ರಾಹಿಮನು ತನ್ನ ಗೀತಗಳಲ್ಲಿ ಕೆಲವು ರಾಗಗಳನ್ನು ಮೂರ್ತೀಕರಿಸಿದ್ದಾನೆ. ಸಂಗೀತ ಶಾಸ್ತ್ರದಲ್ಲಿ ಹೇಳಿದಂತೆ ಪ್ರತಿಯೊಂದು ರಾಗವೂ ನವರಸಗಳಲ್ಲಿಯ ಒಂದು ರಸವನ್ನು ಪ್ರತಿನಿಧಿಸುತ್ತದೆ. ಇಲ್ಲಿಯ ಬಹುತೇಕ ರಾಗಗಳು ಶೃಂಗಾರ ರಸ ಪ್ರಧಾನವಾಗಿದ್ದರೂ ಕೆಲವು ರಾಗಗಳು ಶೋಕ, ಆರ್ತ, ಭಕ್ತಿ, ದೈನ್ಯ ಭಾವಗಳಿಗೂ ಪ್ರಾಮುಖ್ಯತೆ ನೀಡಿದ್ದಾನೆ. ರಸಗಳ ಹೊರತಾಗಿ ಹಿಂದು ದೇವ-ದೇವತೆಗಳಲ್ಲಿ ಹಲವು ರಾಗಗಳನ್ನು ಮೂರ್ತೀಕರಿಸಿದ್ದು ವಿಶೇಷವಾಗಿದೆ.

ಈಶ್ವರನನ್ನು ಮೂರ್ತೀಕರಿಸಿದ ಭೈರವ ರಾಗದ ಒಂದು ಗೀತೆ ಹೀಗೆ ಪ್ರಾರಂಭವಾಗುತ್ತದೆ.

'ಭೈರವ ಕರ್ಪೂರ ಭಾಲ ತಿಲಕ ಚಂದ್ರಾ ।
ತ್ರಿನೇತ್ರಾ ಜಟಾ ಮುಕುಟ ಗಂಗಾಧರಾ' ॥

ಆಸಾವರೀ ರಾಗವನ್ನು ಗೌರಾಂಗ ಯುವತಿಯಲ್ಲಿ ಮೂರ್ತೀಕರಿಸಿದ್ದಾನೆ. ಕಾನಡಾರಾಗ ನಾಯಕಿಯ ಗೌರ ವರ್ಣವು ಕೇತಕಿಯ ಮಧ್ಯದ ಶ್ವೇತ ವರ್ಣದಂತಿದೆ. ಅವಳ ಸೀರೆ ನೀಲ ವರ್ಣದ್ದಾಗಿದ್ದರೆ, ಕುಪ್ಪುಸ ಹಳದಿ ವರ್ಣದ್ದು. ಅವಳ ಹಸ್ತಗಳು ಕುಮುದವಾದರೆ ನೇತ್ರಗಳು ಕಮಲದಂತೆ.

ಕೇದಾರ ರಾಗದ ನಾಯಕಿ ಒಬ್ಬ ವಿರಹಿಣಿ ಅವಳ ಗಲ್ಲಗಳು ಸುಂದರವಾಗಿವೆ. ಅವಳು ಗಲ್ಲದ ಮೇಲೆ ಕೈ ಇಟ್ಟುಕೊಂಡು ಕುಳಿತಿದ್ದಾಳೆ. ಅವಳು ಕೃಷಾಂಗಿ, ಕುಟಿಲ ಕೇಶಗಳು, ಅವಳು ಅತ್ಯಂತ ಸ್ವಚ್ಛವಾಗಿ ವಸ್ತ್ರಗಳನ್ನು ತೊಟ್ಟಿದ್ದಾಳೆ.

ಇಬ್ರಾಹಿಮನು ತನ್ನ ನವರಸ ಗೀತಗಳ ಸಂದೇಶವನ್ನು ಒಂದು ಪದ್ಯದಲ್ಲಿ ಸುಂದರವಾಗಿ ಹೇಳುತ್ತಾನೆ.

'ಭಾಕಾ ನ್ಯಾರೀ ನ್ಯಾರೀ ಭಾವ ಏಕ ಕಹಾ ತುರುಕ ಕಹಾ ಬರಹಾಮನ ।
ಉತ್ತಮ ಭಾಗನಿಕೋ ಸೋ ಸೋಹೀ ಜಾ ಸರಸುತೀ ಹುಈ ಪ್ರಸನ್ನ ।
ಇಬ್ರಾಹಿಮ ಸೊಂಸಾರ ಚಾಹೆ ವಿದ್ಯಾ, ಸಬದ, ಗುರು ಸೇವಾ ಜಪಕರ ಏಕಮನ॥

(ಭಾಷೆಗಳು ಬೇರೆ ಬೇರೆಯಾದರೇನು ಅವುಗಳ ಭಾವ ಒಂದೇ ಆಗಿದೆ. ಅವರು ತುರುಕರಾಗಿರಲಿ, ಬ್ರಾಹ್ಮಣರಾಗಿರಲಿ ಉತ್ತಮರಾಗಿದ್ದರೆ ಅವರಿಗೆ ಸರಸ್ವತಿಯು ಒಲಿದು ಪ್ರಸನ್ನಳಾಗುತ್ತಾಳೆ. ಅಂತೆಯೇ ಇಬ್ರಾಹಿಮನು ವಿದ್ಯೆ, ಸಂಗೀತ ಹಾಗೂ ಗುರು ಸೇವೆಯನ್ನು ಬಯಸುತ್ತಾನೆ. ಅವುಗಳಿಗಾಗಿ ಏಕಾಗ್ರ ಚಿತ್ತನಾಗಿ ಜಪ ಮಾಡುತ್ತಾನೆ.)

ಮೂಲತಃ ಪರ್ಶಿಯನ್ ಲಿಪಿಯಲ್ಲಿದ್ದ 'ಕಿತಾಬೆ-ನೌರಸ' ದಖಣೀ ಕವನ ಸಂಕಲನವನ್ನು ೧೯೫೫ರಲ್ಲಿ ಡಾ. ನಜೀರ ಅಹ್ಮದ ಅವರು ಲಖನೌ ವಿಶ್ವವಿದ್ಯಾಲಯದಿಂದ

ಉರ್ದು ಲಿಪಿಯಲ್ಲಿ ಪ್ರಕಟಿಸಿದರು. ಅನಂತರ ೧೯೬೨ ರಲ್ಲಿ ಡಾ. ಉಷಾ ಇಥಾಪೆ ಎಂಬವರು ಪುಣೆ ವಿಶ್ವ ವಿದ್ಯಾಲಯದಲ್ಲಿ 'ಇಬ್ರಾಹಿಮ ನಾಮಾ' ಹಾಗೂ 'ನವರಸ ಕಿತಾಬ' ಗಳ ಅಭ್ಯಾಸ ಮಾಡಿ, ಮಹಾ ಪ್ರಬಂಧವನ್ನು ಬರೆದರು. ಕೊನೆಯಲ್ಲಿ ೫೭ ಗೀತಗಳು ೧೩ ದ್ವಿಪದಿಗಳನ್ನು ದೇವನಾಗರಿ ಲಿಪಿಯಲ್ಲಿ ಕೊಟ್ಟಿದ್ದು ಅದಿನ್ನೂ ಹಸ್ತ ಪ್ರತಿಯಲ್ಲಿದೆ.[೧೫]

### ೩.೨.೨ ಇಬ್ರಾಹಿಮ ನಾಮಾ

ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿದ್ದ ಕವಿ ಅಬ್ದುಲ್ಲಾ ಮೂಲತಃ ದೆಹಲಿಯವನು. ಆತನ ಪೂರ್ವ ಚರಿತ್ರೆಯ ಬಗ್ಗೆ ಈ ವರೆಗೆ ವಿಶೇಷ ದೊರೆತಿಲ್ಲ. ಆತನ ತಂದೆ ತಾಯಿ, ಮನೆತನ ಯಾವುದರ ಬಗ್ಗೆಯೂ ತಿಳಿದಿಲ್ಲ. ದೆಹಲಿಯಿಂದ ಆತನು ಯಾವತ್ತು ವಿಜಾಪುರಕ್ಕೆ ಬಂದನೆಂಬುದನ್ನೂ ಖಚಿತವಾಗಿ ಹೇಳಲು ಬಾರದು. ಆತ ತನ್ನ ಆಶ್ರಯದಾತನ ಕುರಿತು ಬರೆದ 'ಇಬ್ರಾಹಿಮ ನಾಮಾ' ದ ಕೊನೆಯಲ್ಲಿ ಲೇಖನದ ಕಾಲವನ್ನು ಹೇಳಿದ್ದಾನೆ. ಅವನು 'ಇಬ್ರಾಹಿಮ ನಾಮಾ' ಕಾವ್ಯವನ್ನು ಕ್ರಿ. ಶ. ಸು ೧೬೦೪ರ ಹೊತ್ತಿಗೆ ಬರೆದು ಮುಗಿಸಿದನಂತೆ. ಕಥನ ಕಾವ್ಯ ಆಗಿರುವ 'ಇಬ್ರಾಹಿಮ ನಾಮ' ೭೧೨ ದ್ವಿಪದಿಗಳನ್ನು ಹೊಂದಿದೆ. ಅದರಲ್ಲಿ ೪೪ ಭಾಗಗಳನ್ನು ಮಾಡಿದೆ. ಜೊತೆಗೆ ಪ್ರಾರಂಭದಲ್ಲಿ ದೇವತಾ ಸ್ತುತಿಯಿದೆ. ಅದನ್ನೊಳಗೊಂಡು ೪೫ ಭಾಗಗಳೆನ್ನಬಹುದು.

ಕಾವ್ಯದ ಹೆಸರೆ ಹೇಳುವಂತೆ 'ಇಬ್ರಾಹಿಮ ನಾಮಾ' ಎರಡನೆಯ ಇಬ್ರಾಹಿಮ ಆದಿಲಶಹನನ್ನು ಕುರಿತಾದ ಕಥನ ಕಾವ್ಯವು ಆತನ ರಾಜ್ಯಕಾಲ, ಆತನ ಗುಣಗಳು, ಉದಾರತೆ, ಆತನ ರಾಜಧಾನಿಯ ವೈಭವ ಇತ್ಯಾದಿಗಳನ್ನು ತನ್ನ ಕಾವ್ಯದಲ್ಲಿ ರಸಭರಿತವಾಗಿ ಕವಿ ವರ್ಣಿಸಿದ್ದಾನೆ.

ಅಬ್ದುಲ್ಲಾ ದೆಹಲವಿಯು ಪರ್ಶಿಯನ್ ಅರೇಬಿಕ್ ಭಾಷೆಯ ಪಂಡಿತನೇನೂ ಆಗಿರಲಿಲ್ಲ. ಉರ್ದು, ದಖಣಿ ಹಿಂದಿ, ಪರ್ಶಿಯನ್ ಕವಿಗಳ ಚರಿತ್ರೆ ಅಥವ ಅವರ ಸಾಹಿತ್ಯದ ಚರ್ಚೆ ಬಂದಾಗಲೂ ಆತನ ಹೆಸರು ಬರುವುದಿಲ್ಲ. ಅದಕ್ಕೆ ಕಾರಣ ಆತನು ಪಂಡಿತನಾಗಿರದಿದ್ದುದೇ ಕಾರಣವಾಗಿರಬಹುದು. ಅವನಿಗೆ ಪರ್ಶಿಯನ್ ಅರೇಬಿಕ್ ಭಾಷೆಗಳಲ್ಲಿ ಗತಿ ಇರಲಿಲ್ಲವೆಂಬುದನ್ನು ಆತನೇ ತನ್ನ ಕಾವ್ಯದಲ್ಲಿ ಒಂದೆಡೆ ಹೀಗೆ ಹೇಳಿಕೊಂಡಿದ್ದಾನೆ.

'ಜಬಾ ಹಿಂದುಈ ಮುಂಜ ಸೋ ದಿಹಲವೀ ।
ನ ಜಾನೂ ಅರಬ ಜೌರ ಅಜಬ ಮಸ್ನವೀ' ॥ ೯೯ ॥

ತಾನು ದೆಹಲಿಯವನಾದುದರಿಂದ ತನ್ನ ಭಾಷೆ ಹಿಂದುಈ ಎಂದು ಹೇಳಿಕೊಂಡಿದ್ದಾನೆ. ಅವನಿಗೆ ಅರಬ ಹಾಗೂ ಪರ್ಶಿಯನ್ ಭಾಷೆಗಳ ಮಸ್ನವಿಗಳ ಪರಿಚಯವೂ ಇರಲಿಲ್ಲವೆಂದು ಹೇಳಿಕೊಂಡಿದ್ದಾನೆ.

ಮಸ್ನವಿ ಎಂದರೆ ಕಥಾ ಕಾವ್ಯಗಳು. ಪರ್ಶಿಯನ್ ಮಸ್ನವಿಗಳಲ್ಲಿರುವಂತೆ, ದಖಣಿ ಮಸ್ನವಿಯಲ್ಲೂ ಅಬ್ದುಲ್ಲನು ತನ್ನ ಕಾವ್ಯದ ಪ್ರಾರಂಭದಲ್ಲಿ ಈಶ್ವರನನ್ನು ಸ್ತುತಿಸಿ, ಬುದ್ಧಿ (ಅಕ್ಲ) ಮತ್ತು ವಿದ್ಯೆ (ಇಲ್ಮ) ಗಳ ವರ್ಣನೆಯನ್ನು ಮಾಡುತ್ತಾನೆ. ಬುದ್ಧಿ ಮತ್ತು ವಿದ್ಯೆಯೆಂದರೆ ಭಾರತೀಯ ಪರಂಪರೆಯಲ್ಲಿ ಗಣಪತಿ ಹಾಗೂ ಸರಸ್ವತಿಯರ ಸ್ತುತಿಯೆಂದು ವಿದ್ವಾಂಸರು ಗುರುತಿಸಿದ್ದಾರೆ.

ಅಬ್ದುಲ್ಲಾ, ಪ್ರಾರಂಭದ ೩೬ ದ್ವಿಪದಿಗಳಲ್ಲಿ ದೇವರನ್ನು ಸ್ತುತಿಸಿದ್ದಾನೆ. 'ಓ ಈಶ್ವರನೆ, ನನಗೆ ವಾಣಿಯನ್ನು ಕೊಡು. ಅದರಲ್ಲಿಯ ಕೆಲವು ಶಬ್ದಗಳಿಂದ ಅಮೂಲ್ಯ ಸಾಹಿತ್ಯ ನಿರ್ಮಾಣವಾಗಲಿ. ಈ ಜಗತ್ತಿನಲ್ಲಿ ನೀನೇ ಎಲ್ಲ ಕಡೆಗೆ ತುಂಬಿಕೊಂಡಿರುವಿ. ಎಂದು ಮುಂತಾಗಿ ಹೇಳುತ್ತಾನೆ. ಪ್ರಾರಂಭದ ದ್ವಿಪದಿಯೇ 'ವಾಣಿ'ಯ ಆವಾಹನೆಯಾಗಿದೆ.

> 'ಇಲಾಹೀ ಜಬಾನ ಗಂಜ ತೂಂ ಖೋಲ ಮುಂಜ ।
> ಅಮೋಲಿಕ ಬಹಾಕರ ಯೂ ಕುಛ ಬೋಲ ಮುಂಜ ॥ ೧ ॥

ಅನಂತರದ ೧೪ ದ್ವಿಪದಿಗಳಲ್ಲಿ ಮಹ್ಮದ ಪೈಗಂಬರನನ್ನು ಸ್ತುತಿಸಿ ಮುಂದಿನ ಹತ್ತು ದ್ವಿಪದಿಗಳಲ್ಲಿ ಪೈಗಂಬರನ ನಾಲ್ಕು ಜನ ಸಹಾಯಕರಾದ ಅಬೂಬಕರ, ಉಮರ, ಉಸ್ಮಾನ ಮತ್ತು ಅಲಿಗಳ ವಿಶೇಷತೆಯನ್ನು ಹೇಳುತ್ತಾನೆ. ಆ ಮುಂದಿನ ಎಂಟು ದ್ವಿಪದಿಗಳಲ್ಲಿ ಕಲಬುರ್ಗಿಯ ಬಂದಾ ನವಾಜಗೇಸೂದರಾಜನನ್ನು ಸ್ತುತಿಸಿ, ಅನಂತರ ವಾಡಿಕೆಯಂತೆ ಕಥಾ ನಾಯಕನನ್ನು ಸ್ತುತಿಸುತ್ತಾನೆ.

ಕಥಾ ನಾಯಕನಾದ ಎರಡನೆಯ ಇಬ್ರಾಹಿಮ ಆದಿಲಶಹನ ಗುಣಗಾನವನ್ನು ಮಾಡುತ್ತ, ಒಂದೆಡೆ ಆತನನ್ನು ಈಶ್ವರನ ಅಂಶವೆಂಬ ಹಾಗೆ. ಚಿತ್ರಿಸಿದ್ದು ಭಾರತೀಯ ಪರಂಪರೆಯ 'ನಾ ವಿಷ್ಣುಃ ಪೃಥ್ವೀ ಪತಿ'ಗೆ ಅನುಗುಣವಾಗಿದೆ.

೩೦ ದ್ವಿಪದಿಗಳಲ್ಲಿ ಆತನನ್ನು ವರ್ಣಿಸುವಾಗ ಆತನ ವಿದ್ವತ್ತನ್ನು, ಆತನು ರಚಿಸಿದ ನವರಸ ಕಾವ್ಯ ಹಾಗೂ ರಾಜ್ಯದ ತುಂಬೆಲ್ಲ ಇರುವ ಅದರ ಪ್ರಶಸ್ತಿಯನ್ನು ವರ್ಣಿಸಿದ್ದಾನೆ. ಈ ರಾಜನ ಹತ್ತಿರ ವಿದ್ಯೆ ಹಾಗೂ ಲಕ್ಷ್ಮಿ ಇಬ್ಬರೂ ವಾಸವಾಗಿದ್ದಾರೆಂದು ಹೇಳುತ್ತಾನೆ:

> 'ನ ಐಸಾ ಸುನಾ ಕೌಂ ಸೋ ದೇಖಾ ಅಯಾನ
> ವಿದ್ಯಾ ಲಚ್ಛಮೀ ಜೋರ ದೇವೇ ದೋ ದಾನ' ॥ ೮೫ ॥

ಅನಂತರ ಮತ್ತೆ ಇಪ್ಪತ್ತು ದ್ವಿಪದಿಗಳಲ್ಲಿ ಈಗ ವಾಣಿಯನ್ನು ನೇರವಾಗಿ ಸ್ತುತಿಸುತ್ತಾನೆ. ಈ ಸೃಷ್ಟಿಯ ಎಲ್ಲ ಜಡ ಮತ್ತು ಚೇತನಗಳ ವಿಕಾಸವು ಗೂಢವಾದ ವಾಣಿಯಿಂದಲೇ ಆವಿಷ್ಕೃತವಾಗಿದೆ. ಈ ಸೃಷ್ಟಿಯ ಆದಿ ಅಂತಗಳು ವಾಣಿಯ ಅಧೀನದಲ್ಲಿವೆ ಎಂದು ಹೇಳುತ್ತಾನೆ:

> 'ವಚನ ದರ್ಮಿಯಾನ ರಹ ಅಜಲ ಜೌರ ಅಬದ ।
> ರಚ್ಯಾತೀನ ತಿಲೋರ್ಕ ಲಾ ಕರ ಸಬದ ॥ ೧೨೧ ॥

ಮುಂದಿನ ದ್ವಿಪದಿಗಳಲ್ಲಿ ಒಂದು ಸುಂದರವಾದ ಕಲ್ಪನೆಯಲ್ಲಿ ಬರವಣಿಗೆಯ ರೀತಿಯನ್ನು ಹೇಳಿದ್ದಾನೆ. ಬುದ್ಧಿ ಬೇಟೆಗಾರನಂತೆ, ಮನಸ್ಸು ಕತ್ತಿ (ತಲವಾರ) ಇದ್ದ ಹಾಗೆ. ಚಿಂತನೆಯೇ ಧನುಸ್ಸು, ವಚನಗಳೆ (ವಾಣಿ) ಬಾಣಗಳು ಹಾಗೂ ಕಿವಿಗಳು ಚಿಗರೆಗಳು. ಆ ಚಿಗರೆಗಳ ನಾಭಿಯಿಂದ ಕಸ್ತೂರಿ ಉದಿಸಿ ಅದರ ಸುಗಂಧದಿಂದ ವಿದ್ವಾಂಸರು ಸಂತುಷ್ಟರಾಗುತ್ತಾರೆ:

'ದಿಸೆ ರೂಪ ಕಾಗಜ ಕಪೂರಕಾ ಮೈದಾನ ।
ಕಲಮ ಮುಷ್ಕಕಾನ ಹರನ ಫಿರ ದರ್ಮಿಯಾನ ॥
ಶಿಕಾರಿ ಅಕ್ಕಲ ದೇಕದಿಲ್ ತೇಕ ಆರ ।
ಧನುಕ ಫಿಕರ ಕಾ ಲೇ ಬಚನ ತೀರ ಮಾರ ॥ ೧೬೫ ॥

ಇಂಥ ಹಲವಾರು ಸುಂದರ ಕಲ್ಪನೆಗಳು ಕಾವ್ಯದುದ್ದಕ್ಕೂ ದೊರೆಯುತ್ತವೆ.

ಹೀಗೆ ೧೪೫ ದ್ವಿಪದಿಗಳನ್ನು ಕಾವ್ಯದ ಪ್ರಾರಂಭಕ್ಕೆ ಉಪಯೋಗಿಸಿ, ಅನಂತರ ಮೂಲ ಕಥಾ ನಾಯಕನ ಚರಿತ್ರೆಯನ್ನು ಹೇಳಲು ತೊಡಗುತ್ತಾನೆ. ಇಬ್ರಾಹಿಮನ ಉದಾರತೆಯನ್ನು ವರ್ಣಿಸುವಾಗ 'ರಾಜನ ಉದಾರ ರೂಪವಾದ ಮೇಘ ವರ್ಷವು ಈ ಜಗದ ದರಿದ್ರರೂಪದ ಅಗ್ನಿಯನ್ನು ಶಾಂತ ಮಾಡಿತು'. ಎನ್ನುತ್ತಾನೆ. ಇನ್ನೊಂದೆಡೆ 'ರಾಜನ ಉದಾರತೆಯಿಂದ ಮತ್ತೊಮ್ಮೆ ಬಲಿ ಚಕ್ರವರ್ತಿ ಹಾಗೂ ಕುಂತೀಪುತ್ರ ಕರ್ಣನು ಜೀವಂತರಾದರು' ಎಂದು ಭಾರತೀಯ ಪೌರಾಣಿಕ ವ್ಯಕ್ತಿಗಳೊಂದಿಗೆ ಹೋಲಿಸಿದ್ದು ವಿಶೇಷವಾಗಿದೆ.'

'ಹೋ ಶಹ ದಾನ ಅವತಾರ ದಾನಿಕ ಅಪಾರ ।
ಸೋ ಬಲ ಚೌರ ಕರನ ನಾವ್ಹಾ ಜಗ ಆಶಕಾರ ॥ ೨೦೦ ॥

ಹೀಗೆ ಸುಮಾರು ೧೫೦ ಕ್ಕಿಂತ ಅಧಿಕ ದ್ವಿಪದಿಗಳಲ್ಲಿ ಬಾದಶಹನನ್ನು ವರ್ಣಿಸಿ ಮುಂದಿನ ೧೦೦ ದ್ವಿಪದಿಗಳಲ್ಲಿ ರಾಜಧಾನಿ ವಿಜಾಪುರ ನಗರದ ವೈಭವವನ್ನು ವರ್ಣಿಸುತ್ತಾನೆ. ವಿಜಾಪುರವನ್ನು ಆತನು ಕಾವ್ಯದುದ್ದಕ್ಕೂ ವಿದ್ಯಾಪುರವೆಂದು ಕರೆದಿದ್ದಾನೆ.

ಈ ವಿದ್ಯಾಪುರವು ಪೃಥ್ವೀಯೆಂಬ ಯುವತಿಯ ಮುಕುಟವಂತೆ!

'ವಿದ್ಯಾಪುರ ನಗರ ಹೈ ಭಿ ಉಸಕೊ ಜೋ ನಾವ್ಹಾ ।
ಸುನೋ ಅಬ ಸಿಫತ ಶಹ ರಹನ ತಖ್ತ ಠಾವ್ಹಾ ।
ಕಿ ಧನ ಉಸ ಜಮೀನ ಠಾವ್ಹಾ ಹೈ ತಖ್ತ ಭರ ।
ಬಸ್ಯಾ ಸೀಸ ಜಿಸಕೆ ವಿದ್ಯಾಪೂರ ನಗರ ॥ ೨೧೯-೨೨೦ ॥

ಎಂದು ಪ್ರಾರಂಭವಾಗುವ ವಿಜಾಪುರದ ವರ್ಣನೆಯಲ್ಲಿ ಅಲ್ಲಿಯ ಕೋಟೆ, ಕೊತ್ತಲಗಳು, ಮಹಲು, ಬಜಾರುಗಳು ಇತ್ಯಾದಿಗಳ ಚಿತ್ರ ಸುಂದರವಾಗಿ ಬಂದಿದೆ. ರಾಜನ ದರ್ಬಾರು, ಆತನ ಆಶ್ರಯದಾತರು ಕವಿ ಸಾಹಿತಿಗಳು ಆತನ ದಿಕ್-ದಿಗಂತಗಳ ಕೀರ್ತಿ,

ಆತನಿಗಿರುವ ಜಗದ್ಗುರು ಉಪಾಧಿ, ಆತನ ಆಸ್ಥಾನವೆಂದರೆ ಇಂದ್ರನ ಆಸ್ಥಾನವೂ ಅದರ ಮುಂದೆ 'ಪೀಚು'. ಆದಿಲಶಾಹನು ಇಂದ್ರನಿಗಿಂತ ಎಷ್ಟೋ ಪಟ್ಟು ಅಧಿಕ ಶ್ರೇಷ್ಠನೆನ್ನುತ್ತಾನೆ.

'ಇಂದರ ಏಕ ಅಂಬರಾವತೀ ರಹನ ಥಾರ ।
ವಿದ್ಯಾಪುರ ನಗರ ಶಹ ವೈಸೆ ಛಪ ಹಜಾರ ॥

(ಇಂದ್ರನ ಹತ್ತಿರ ಒಂದು ಅಮರಾವತಿ ಇದೆ. ಆದರೆ ವಿಜಾಪುರವು ಅದರ ೫೬ ಸಾವಿರ ಪಟ್ಟು ಮಿಗಿಲು)

'ಇಂದರ ದೋ ಈ ಗಾಯನ ನಾರದ ತುಂಬ ಶುಮಾರ ।
ಸೋಶಹ ಪಾಸ ಗಾಯನ ವೈಸೆ ನೌ ಹಜಾರ ॥

(ಇಂದ್ರನ ಹತ್ತಿರ ನಾರದ ತುಂಬುರರಂತೆ ಇಬ್ಬರು ಗಾಯಕರಿದ್ದರೆ ಬಾದಶಹನ ಹತ್ತಿರ ಅಂಥ ೯ ಸಾವಿರ ಗಾಯಕರಿದ್ದಾರೆ)

'ಸೋ ಯೂ ಇಂದ್ರ ಹೌರ ಶಾಹ ಕ್ಯೋಂ ಸರ ಕರೂಂ
ಗಗನ ಹೌರ ಜಮೀನ ಕ್ಯೋಂ ಮಿಲಾಕರ ಧರೂಂ' ॥

(ಇಂದ್ರ ಹಾಗೂ ಬಾದಶಹನನ್ನು ಹೋಲಿಸಿ ವರ್ಣಿಸುವುದೇ ತಪ್ಪು. ಬಾದಶಹ ಗಗನವಾದರೆ ಇಂದ್ರ ಭೂಮಿ ಅವುಗಳನ್ನು ಕೂಡಿಸಲು ಆದೀತೆ?)

ಕವಿ ಅಬ್ದುಲ್ಲಾ ದೆಹಲವಿಯು ಭಾರತೀಯ ಪುರಾಣಗಳ ಅಭ್ಯಾಸವನ್ನು ಮಾಡಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಅನೇಕ ಸಂಸ್ಕೃತ ಕಾವ್ಯಗಳನ್ನೂ ಓದಿರಬೇಕು. ಅಂತೆಯೇ ಉಭಯ ಭಾಷೆಯಗಳನ್ನು ಬಲ್ಲ ಕೆಲವು ವಿದ್ವಾಂಸರು ಅಬ್ದುಲ್ಲಾನನ್ನು ಸಂಸ್ಕೃತದ ಬಾಣ ಭಟ್ಟನಿಗೆ ಹೋಲಿಸಿದ್ದಾರೆ.

'ಇಬ್ರಾಹಿಮ ನಾಮಾ' ಕಾವ್ಯವು ದೇವಿಸಿಂಗ ಚೌಹಾನರಿಂದ ದೇವನಾಗರಿ ಲಿಪಿಯಲ್ಲಿ ಸಂಪಾದಿತವಾಗಿದೆ. ಅದನ್ನು ೧೯೭೩ರಲ್ಲಿ ಮಹಾರಾಷ್ಟ್ರ ಸರಕಾರದ ಪುರಾತತ್ವ ವಿಭಾಗವು ಸುಂದರವಾಗಿ ಪ್ರಕಟಿಸಿದೆ.

### ೩.೨.೩ ಮಹಾಕವಿ ನುಸ್ರತಿ

ಎರಡನೆಯ ಅಲಿ ಆದಿಲಶಹನ (ಕ್ರಿ. ಶ. ೧೬೫೬-೧೬೭೨) ಆಸ್ಥಾನದಲ್ಲಿದ್ದ ಮುಲ್ಲಾ ನುಸ್ರತಿ ದಖಣಿ ಉರ್ದು ಸಾಹಿತ್ಯದಲ್ಲಿ ಒಬ್ಬ ಮಹಾಕವಿಯೆಂದು ನಮೂದಿತನಾಗಿದ್ದಾನೆ. ಆತನು 'ಗುಲ್ಶನೇ ಇಶ್ಕ' 'ಅಲೀ ನಾಮಾ' ಹಾಗೂ 'ತಾರೀಖೆ ಇಸ್ಕಂದರಿ' ಎಂಬ ಮೂರು ಕಾವ್ಯ ಕೃತಿಗಳನ್ನಲ್ಲದೆ ಕೆಲವು ಸ್ಪುಟ ಕವಿತೆಗಳನ್ನೂ ಬರೆದಿದ್ದಾನೆ. ಆತನ ಮೂರೂ ಕಾವ್ಯಗಳು ಪ್ರಕಟವಾಗಿವೆ. 'ಗುಲ್ಶನೇ ಇಶ್ಕ' ಒಂದು ಪ್ರೇಮಾಖ್ಯಾನವಾಗಿದ್ದರೆ, 'ಅಲಿನಾಮಾ' ಹಾಗೂ 'ತಾರೀಖೆ ಇಸ್ಕಂದರಿ' ಎರಡೂ ಚಾರಿತ್ರಿಕ ಕಾವ್ಯಗಳು.

'ಅಲಿನಾಮಾ'ದಲ್ಲಿ ಎರಡನೆಯ ಅಲಿ ಆದಿಲಶಹನ ಚರಿತ್ರೆಯ ಅಂಶಗಳು ಕಾಣಿಸಿಕೊಂಡಿದ್ದರೆ 'ತಾರೀಖೆ ಇಸ್ಕಂದರಿ'ಯಲ್ಲಿ ಆತನ ಮಗ, ಆದಿಲಶಾಹಿಗಳ ಕೊನೆಯ ದೊರೆ ಸಿಕಂದರನ ಕುರಿತಾಗಿ ಎಂದು ಹೇಳಬಹುದಾದರೂ ವಿಶೇಷವಾಗಿ ಉಮರಾಣಿ ಯುದ್ಧದ ವರ್ಣನೆ ತುಂಬಿ ಕೊಂಡಿದೆ.

ಮುಲ್ಲಾ ನುಸ್ರತಿ ಎಂದೇ ಖ್ಯಾತನಾಗಿರುವ ಕವಿಯ ಪೂರ್ತಿ ಹೆಸರು ಮಹಮ್ಮದ ನುಸ್ರತ ಎಂದೂ, ಆತನ ತಂದೆಯ ಹೆಸರು ಶೇಖ ಮಹಮ್ಮದ ನುಸ್ರತ ಎಂದು ಹೇಳಲಾಗಿದೆ. ಆತನಿಗೆ ಇಬ್ಬರು ಸಹೋದರರಿದ್ದರು. ತಂದೆ ಆದಿಲಶಾಹಿಗಳಲ್ಲಿ ಕೆಲಸಕ್ಕಿದ್ದನು. ಕವಿಯು 'ಗಲ್ಶನೆ ಇಶ್ಕ'ದಲ್ಲಿ ಹೇಳಿಕೊಂಡಂತೆ, ಆತನ ತಂದೆಯು ಶೂರನಾಗಿದ್ದನು. ಪ್ರಾರಂಭದಿಂದಲೂ ಬಾದಶಹನ ಸೈನ್ಯದಲ್ಲಿ ಒಬ್ಬ ಸೇನಾಧಿಕಾರಿಯಾಗಿದ್ದನು.

ದಖಣಿ ಕಾವ್ಯಗಳಲ್ಲಿ ಸಾಮಾನ್ಯವಾಗಿ ಹೇಳಿಕೊಳ್ಳುವಂತೆ ಆಶ್ರಯದಾತನನ್ನೆ ಗುರು ಎಂಬುದಾಗಿ ನುಸ್ರತಿಯೂ ಎರಡನೆಯ ಅಲಿ ಆದಿಲಶಾಹನನ್ನು ಗುರು ಎಂದು ಹೇಳಿಕೊಂಡಿದ್ದಾನೆ. ಆದರೆ ವಾಸ್ತವದಲ್ಲಿ ಕವಿತ್ವ ಆತನಿಗೆ ಜನ್ಮಜಾತವಾಗಿ ಬಂದದ್ದೆಂದೂ, ತನ್ನ ಮನೆತನದಲ್ಲಿ ಸಾಹಿತ್ಯಿಕ ವಾತಾವರಣ ಇಲ್ಲದ್ದರಿಂದ ತನಗೆ ಬಂದ ಕವಿತ್ವ ಪರಮಾತ್ಮನ ದೇಣಿಗೆ ಎಂದೂ ಹೇಳಿಕೊಂಡಿದ್ದಾನೆ.

'ನ ಕುಛ್ ಶಾಹರೀ ಕಸ್ಬ ಕಾ ಕಾಮ ಹೈ ।
ಕಿ ಯೋ ಹಕ್ ಕೀ ಬಕ್ಷೀಸ ತೇ ಇಲ್ಹಾಮ ಹೈ' ॥

'ಕೇವಲ ಅಭ್ಯಾಸ ಮಾತ್ರದಿಂದ ಕಾವ್ಯ ಉದ್ಭವಿಸುವುದಿಲ್ಲ. ಅದಕ್ಕೆ ಭಗವಂತನಿಂದ ದೊರೆಯುವ ಅಂತಃಸ್ಫೂರ್ತಿ ಬೇಕು ಮತ್ತು ಹಾಗೆ. ಭಗವಂತನ ಕೃಪೆಯಿಂದಲೇ ನನಗೆ ಈ ಆಶ್ಚರ್ಯ ಕಾರಕ ವಾಣಿ ಬಂದಿದೆ' ಎಂದು ಹೇಳಿಕೊಳ್ಳುತ್ತಾನೆ. ಅದರಿಂದಾಗಿಯೇ ಅವನಿಗೆ 'ಮಲಿಕುಶ್ಶಅರಾ' ಎಂಬ ಬಿರುದು ಬಂದಿತ್ತು. ಅದರ ಅರ್ಥ 'ಕವಿರಾಜ'. ವಿಜಾಪುರವು ಮೊಗಲರಿಗೆ ವಶವಾಗುವ ಮುನ್ನ ಸುಮಾರು ಆರು ವರುಷ, ಅಂದರೆ ಕ್ರಿ.ಶ. ೧೬೮೦ ರಲ್ಲಿ ನುಸ್ರತಿ ನಿಧನ ಹೊಂದಿದನು. ಆತನ ಸಮಾಧಿ ವಿಜಾಪುರದಲ್ಲಿ ಇಂದಿನ ಸರಕಾರಿ ಪ್ರೌಢಶಾಲೆಯ ಆವರಣದಲ್ಲಿ ಇದೆ.

ಬಾದಶಹನ ಆಶ್ರಯವಿದ್ದರೂ ನುಸ್ರತಿ ಬಡತನದಲ್ಲಿಯೇ ಕಳೆದನೆಂದು ಕಾಣುತ್ತದೆ ಕವಿ ತನ್ನ ದಾರಿದ್ರ್ಯದ ಬಗ್ಗೆ ಅನೇಕ ಸಲ ತನ್ನ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಬದುಕಿನ ಕೊನೆಯ ದಿನಗಳಲ್ಲಿ ಸುಖವನ್ನು ಕಂಡನೆಂದು ಕಾಣುತ್ತದೆ. ಆದರಿಂದಾಗಿ ದಕ್ಷಿಣ ಭಾರತದ ಜನರ ಬಗ್ಗೆ ಆತ ಹೇಳಿದ ಒಂದು ಮಾತು ಗಮನಾರ್ಹವಾಗಿದೆ.

'ಯಾರಾನೆ ದಕನ .ಕಿಸ ಸೂಂ ವಫಾಈ ನ ಕರೆ ।
ಹೋಯ ತೊ ಬುಲಂದ ಬಖ್ತ ಭಲಾಯಿ ನ ಕರೆಂ ॥
ಖೂಬೀ ತೋ ಉನಕೀ ಕಿಯಾ ಶತಲಿ ನಜರ
ಉಪಕಾರ ಹೈ ಕಿ ಫಿರ ಕೊಂ ಬುರಾಈ ನ ಕರೆಂ ॥

'ದಕ್ಷಿಣದ ಮಿತ್ರರು ವಿಶ್ವಾಸಾರ್ಹರಲ್ಲ ಅವರು ಉಚ್ಚ ಪದವಿಯಲ್ಲಿದ್ದರೂ ಅವರಿಂದ ಯಾವ ಒಳ್ಳೆಯ ಕೆಲಸಗಳೂ ಆಗುವುದಿಲ್ಲ. ಅಂಥವರ ಗುಣಗಳ ಬಗ್ಗೆ ನಾನೆಂದಿಗೂ ವಿಚಾರ ಮಾಡುವುದಿಲ್ಲ. ಪ್ರತಿಯಾಗಿ ದಾಕ್ಷಿಣಾತ್ಯರು ಒಂದೊಮ್ಮೆ ಹಾನಿ ಮಾಡದಿದ್ದರೆ ಸಾಕು, ಅದೇ ಒಂದು ಉಪಕಾರವೆಂದು ಭಾವಿಸುವೆ'!

ಭಗವಂತನನ್ನು ಸ್ತುತಿಸುವಾಗ ಆತ ದೇವರಿಂದ ಏನೆಲ್ಲ ಬೇಡುತ್ತ ಅಪ್ರತಿಮ ಕವಿತಾ ಶಕ್ತಿಯನ್ನು ಕೊಡಲು ಕೇಳಿಕೊಂಡಿದ್ದಾನೆ. ಗುಲ್ಶನೆ ಇಶ್ಕದಲ್ಲಿ ಒಂದೆಡೆ.

'ಮೆರೆ ಮನಕಾ ತೋತೀ ತೋ ಬೇಕಾವು ಹೈ ।
ಕವಾನಾ ತೋ ಬಾತ ಉಸಕೊ ಇಲ್ಹಾಮ ಹೈ ॥

ಎಂದು ಹೇಳುತ್ತ 'ನನ್ನ ಮನಸ್ಸು ಒಂದು ನಿಷ್ಕಾಮ ಗಿಳಿ ಇದ್ದಂತೆ. ಅದರಿಂದ ಏನಾದರೂ ಸಾಹಿತ್ಯ ನಿರ್ಮಿತಿಯಾದರೆ ಅದು ಈಶ್ವರನ ಅಂತಃಪ್ರೇರಣೆಯಿಂದಲೇ ಸಾಧ್ಯವಾದದ್ದು' ಎಂದಿದ್ದಾನೆ. ಮುಂದುವರೆದು ತನ್ನ ಜೀವನರೂಪೀ ವೃಕ್ಷಕ್ಕೆ ಕೃತಘ್ನತೆಯ ಕೀಡೆ ತಗಲದದಿಂತೆ, ಮನಸ್ಸು ಸಂಶಯಕ್ಕೆ ಒಳಗಾಗದಿರಲಿ ಎಂದೂ ಪ್ರಾರ್ಥಿಸಿದ್ದಾನೆ. ಬೇರೆ ಯಾವ ಕವಿಗಳೂ ಭಗವಂತನನ್ನು ಈ ರೀತಿಯಾಗಿ ಪ್ರಾರ್ಥಿಸುವುದಿಲ್ಲವೆಂಬುದೇ ಈತನ ವಿಶೇಷವಾಗಿದೆ.

ದಕ್ಷಿಣದ ಹಿಂದಿ ಕವಿಗಳಲ್ಲಿ ಹಾಗೂ ಸಾಹಿತಿಗಳಲ್ಲಿ ಮುಲ್ಲಾ ನುಸ್ರತಿ ಒಬ್ಬ ಸರ್ವಶ್ರೇಷ್ಠ ಕವಿಯೆಂದು, ನುಸ್ರತಿಯ ಕುರಿತು ದೀರ್ಘ ಅಭ್ಯಾಸ ಮಾಡಿದ ಡಾ. ಅಬ್ದುಲ್ ಹಕ್‌ರವರು ಹೇಳುತ್ತಾರೆ. ಅವರ ಪ್ರಕಾರ.

"ರಜ್ಮಿಯಾ (ವೀರರಸ ಪ್ರಧಾನ), ವಾಕಿಯಾತ (ಘಟನೆಗಳು), ವಿಷಯದಲ್ಲಿ ನುಸ್ರತಿಗೆ ವಿಶೇಷ ಪ್ರಾವಿಣ್ಯತೆ ಇತ್ತು. ಅವನು ಸೈನ್ಯದ ಆಕ್ರಮಣ ಯುದ್ಧದ ಘನ ಗಂಭೀರತೆ ಹಾಗೂ ಅಲ್ಲಿಯ ಹೊಡೆದಾಟಗಳ ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ."

"ನುಸ್ರತಿಯ ಯುದ್ಧ ವರ್ಣನದ ವೈಖರಿಯು ಅಲಿನಾಮಾದಲ್ಲಿ ಬಂದಿದೆ. ಆ ಮಸ್ನವಿಯಲ್ಲಿ ಆತನು ತನ್ನ ವರ್ಣನಾಶಕ್ತಿ, ಕಲ್ಪನಾವಿಲಾಸ, ಸಮಕಾಲೀನ ಪ್ರಜ್ಞೆ ಹಾಗೂ ತನ್ನ ವಾಣಿಯ ಶಕ್ತಿಯಿಂದ, ರಜ್ಮಿಯಾ-ಸಿಗಾರಿಗಳಲ್ಲಿ ಅವನನ್ನು ಸರಿಗಟ್ಟುವ ಯಾವ ಕವಿಯೂ ಇಲ್ಲವೆಂದು ಸಿದ್ಧ ಮಾಡಿ ತೋರಿಸಿದ್ದಾನೆ." ಎಂಬುದಾಗಿಯೂ ಡಾ॥ ಹಕ್ ಅವರು ಹೇಳುತ್ತಾರೆ. ಅಲಿನಾಮಾ ಕುರಿತು ಈ ರೀತಿಯ ಅಭಿಪ್ರಾಯಗಳನ್ನು ಅವರು ವ್ಯಕ್ತಪಡಿಸಿದ್ದರೆ, ಆತನ ಮೊದಲ ಕೃತಿ 'ಗುಲ್ಶನೆ ಇಶ್ಕ' ಕುರಿತು "ಬಹುಶಃ ಉರ್ದು ಸಾಹಿತ್ಯ ಹಾಗೂ ದಖಣಿ ಹಿಂದಿಯ ಸರ್ವೋತ್ತಮ ಪ್ರೇಮಾಖ್ಯಾನ" ಎಂಬುದಾಗಿ ಮುಕ್ತಕಂಠದಿಂದ ಹೊಗಳುತ್ತಾರೆ.

'ಗುಲ್ಶನೆ ಇಶ್ಕ' ಒಂದು ಶುದ್ಧ ಕಾಲ್ಪನಿಕ ಕಾವ್ಯವಾಗಿದೆ. ಆತನ ಹೆಸರಿನಲ್ಲಿ 'ಗುಲದಸ್ತ-ಇ-ಇಶ್ಕ' ಎಂಬ ಕಾವ್ಯವನ್ನೂ ಹೇಳಲಾಗುತ್ತದೆ. ಇವೆರಡೂ ಒಂದೇ ಕೃತಿಗಳಾಗಿರುವ ಸಾಧ್ಯತೆಯೂ ಇದೆ.

'ಅಲಿನಾಮಾ' ಹಾಗೂ 'ತಾರೀಖೆ-ಇಸ್ಕಂದರಿ' ಕಾವ್ಯಗಳು ಚಾರಿತ್ರಿಕ ಅಂಶಗಳಿಂದ ಕೂಡಿವೆ ಎಂದು ಹೇಳಿತಷ್ಟೆ. 'ಅಲಿನಾಮಾ' ಒಂದು ಬೃಹತ್ ಕಾವ್ಯ. ಅದರಲ್ಲಿ ಎರಡನೆಯ ಅಲಿ ಆದಿಲಶಾಹನ ಕಾಲದ ವರ್ಣನೆಯಿದೆ. ಅಲ್ಲಿ ಕವಿ ತನ್ನ ಇತಿಹಾಸ ಪ್ರಜ್ಞೆಯನ್ನು ಮೆರೆದಿದ್ದಾನೆ. ಅಶ್ರಯದಾತ ಎರಡನೆಯ ಆಲಿ ಆದಿಲಶಹನ ಚರಿತ್ರೆಯನ್ನು ಹೇಳುವಾಗ ಆತನ ಪರಮ ಶತ್ರು ಶಿವಾಜಿಯ ಉಲ್ಲೇಖ ಬರಲೇಬೇಕಾಗುತ್ತದೆ. ಅದರಂತೆ ನುಸ್ರತಿಯು ಹಲವಾರು ಕಡೆಗೆ ಶಿವಾಜಿಯ ಉಲ್ಲೇಖವನ್ನೂ ಮಾಡುತ್ತಾನೆ. ವೈರಿಯಾದದ್ದರಿಂದ ಆತನ ಪ್ರತಿಯೊಂದು ಕ್ರಿಯೆಯನ್ನೂ ವಿರುದ್ಧ ದೃಷ್ಟಿಯಿಂದ ನೋಡುವುದು ಸಹಜವಾಗಿದೆ. ಆತ ಕಳ್ಳ, ದಂಗೆಖೋರ, ಕಪಟಿ ಎಂದೆಲ್ಲ ವರ್ಣಿಸಿದರೂ ಆತನ ಸಾಹಸ, ರಾಜಕೀಯ ನೀತಿ, ಮರಾಠರ ಶೌರ್ಯ-ಧೈರ್ಯಗಳನ್ನು ಚಿತ್ರಿಸುವಾಗ ಆತ ವಾಸ್ತವ ಚಿತ್ರಣವನ್ನು ಕೊಡಲು ಪ್ರಯತ್ನಿಸುತ್ತಾನೆ. ತನ್ನ ದೃಷ್ಟಿಕೋನದಿಂದ ಅಳೆದು ಬರೆದದ್ದು ಆತನ ಇತಿಹಾಸ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಆತನ ಕುರಿತು ವಿದ್ವಾಂಸರು ೧. ಈತನು ಮುಸಲ್ಮಾನಧರ್ಮದ ಅಭಿಮಾನಿಯೂ ಇತರ ಧರ್ಮಗಳ ದ್ವೇಷಿ ಆಗಿದ್ದ. ೨. ಪ್ರಾದೇಶಿಕ ಭಾಷೆಗಳು ಅವನಿಗೆ ಚೆನ್ನಾಗಿ ಕರಗತವಾಗಿದ್ದುವು. ಆತ ಇಲ್ಲಿಯೇ ಹುಟ್ಟಿ ಇಲ್ಲಿಯೇ ಬೆಳೆದವನು. ೩. ಕಾವ್ಯದಲ್ಲಿ ಬರುವ ಅಲಂಕಾರ, ವರ್ಣನೆ ಇತ್ಯಾದಿಗಳಿಂದ ಆತನು ಸಮಕಾಲೀನ ಹಿಂದು ಸಂಸ್ಕೃತಿಯನ್ನು ಚೆನ್ನಾಗಿ ಅಭ್ಯಸಿಸಿದವನಾಗಿದ್ದನು ಎಂದು ಹೇಳುತ್ತಾನೆ. ೪. ಸರ್ ಚಾರ್ಲಸ್ ಲಾಯಲ್‌ರ ಅಭಿಪ್ರಾಯದಲ್ಲಿ ಅವನು ಮೊದಲು ಬ್ರಾಹ್ಮಣನಾಗಿದ್ದು ಅನಂತರ ಮತಾಂತರ ಗೊಂಡಿರಬೇಕು. ಅವನಿಗೆ ಹಿಂದು ತತ್ವಜ್ಞಾನದಲ್ಲಿ ಆಳವಾದ ಅಭ್ಯಾಸವಿತ್ತು ಎಂಬುದಾಗಿಯೂ ವಿದ್ವಾಂಸರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ನುಸ್ರತಿಯೊಂದಿಗೆ ಆದಿಲಶಾಹಿಯೂ ಅಂತ್ಯಗೊಂಡಿವೆ ಅವರ ಆಸ್ಥಾನ ಸಾಹಿತ್ಯವೂ ನಂದಿಹೋಗಿದೆ.

## ೩.೩. ಸೂಫಿ ಸಂತರ ಸಾಹಿತ್ಯ

ಆದಿಲಶಾಹಿಗಳ ಸುಮಾರು ಎರಡು ಶತಮಾನಗಳ ಆಡಳಿತದಲ್ಲಿ ಸುಮಾರು ಮುನ್ನೂರಕ್ಕಿಂತ ಅಧಿಕ ಸೂಫಿ ಸಂತರು ವಿಜಾಪುರದಲ್ಲಿ ಮತ್ತು ಅವರ ಆಡಳಿತದ ಪ್ರದೇಶಗಳಲ್ಲಿ ಬಂದು ವಾಸಮಾಡಿ ಇಲ್ಲಿಯೇ ಸಮಾಧಿಯನ್ನು ಹೊಂದಿದ್ದಾರೆ. ಆ ಸಂತರಲ್ಲಿಯ ಹಲವಾರು ಜನರು ಅಪರೂಪದ ಸಾಹಿತ್ಯವನ್ನು ರಚಿಸಿದ್ದಾರೆ. ಅದು ಆದಿಲಶಾಹಿಗಳ ಆಸ್ಥಾನ ಸಾಹಿತ್ಯವಲ್ಲವಾದರೂ ಅವರ ಆಶ್ರಯದಲ್ಲಿ ರಚಿತಗೊಂಡ ಸಾಹಿತ್ಯವಾಗಿದೆ. ಸೂಫಿ ತತ್ವಜ್ಞಾನಕ್ಕೆ ಮೀಸಲಾಗದ ಸಾಹಿತ್ಯವಾಗಿದೆ. ಆದ್ದರಿಂದ ಕೃತಿಗಳ ಅವಲೋಕನವನ್ನು ಮಾಡದೆ ವಿಜಾಪುರದಲ್ಲಿ ನಿರ್ಮಾಣಗೊಂಡ ಸಾಹಿತ್ಯದ ಸ್ಥೂಲ ಪಟ್ಟಿಯನ್ನು ಇಲ್ಲಿ ಕೊಡಲಾಗಿದೆ. ಇವುಗಳ ವಿವರವಾದ ಅಭ್ಯಾಸವೂ ಇತ್ತೀಚಿನ ದಿನಗಳಲ್ಲಿ ನಡೆದಿದೆ. ಉರ್ದು ಭಾಷೆಯಲ್ಲಿ ಹಲವಾರು ಗ್ರಂಥಗಳು ಪ್ರಕಟವಾಗಿರುವುದು ಸಹಜವಾಗಿದ್ದರೂ, ರಿಚರ್ಡ್ ಈಟನ್ ಎಂಬ ಮಹಾಶಯನು ಇಪ್ಪತ್ತು ವರುಷಗಳ ಹಿಂದೆ ವಿಜಾಪುರದ ಸೂಫಿಗಳನ್ನು ಕುರಿತು ಮಹಾಪ್ರಬಂಧವನ್ನು ಬರೆದನು. ಅಮೇರಿಕೆಯ ಪ್ರಿನ್ಸ್‌ಟನ್ ವಿಶ್ವ ವಿದ್ಯಾಲಯದಿಂದ ಈ ಪಿಎಚ್‌ಡಿ ಸಂಶೋಧನೆಯು "Sufis of Bijapur" ಎಂಬುದಾಗಿ ಪ್ರಕಟವಾಗಿದೆ.

ಕನ್ನಡದಲ್ಲಿ ಡಾ. ರಹಮತ್ ತರೀಕೆರೆ ಅವರು 'ಕರ್ನಾಟಕದ ಸೂಫಿಗಳು' ಎಂಬ ಸುಂದರ ಪುಸ್ತಕವನ್ನು ಬರೆದಿದ್ದು, ಅದನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯವು ಇತ್ತೀಚೆಗೆ ಪ್ರಕಟಿಸಿದೆ. ಅದರಲ್ಲಿ ವಿಜಾಪುರದ ಸೂಫಿಗಳು ಮತ್ತು ಅವರ ಸಾಹಿತ್ಯದ ಕುರಿತು ಚರ್ಚೆ ಇದೆ. ಇಲ್ಲಿ ಕೆಲವು ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

**ಆದಿಲಶಾಹಿ ಕಾಲದ ಕೆಲವು ಅನುಭಾವ (ಸೂಫಿ) ಸಾಹಿತ್ಯ**

| | ಸೂಫಿ ಸಂತನ ಹೆಸರು | ಕೃತಿ |
|---|---|---|
| ೧. | ಅಬುಲ್ ಹಸನ ಕಾದಿರಿ | 'ಸುಖ ಅಂಜಾನ' |
| ೨. | ಅಮಿನ ಸಯ್ಯದ | 'ಮಜಬ್ ಅಲ್ ಸಲಿಕಿ' |
| ೩. | ಅಮೀನುದ್ದೀನ್ ಆಲಾಶಾಹ I | 'ಇರ್ಶಾದತ್' |
| | | 'ಖಯಾಲ್-ಇ-ರಿಖ್ತಾ' |
| | | 'ಮುಹಿಬ್ ನಾಮಾ' |
| | | 'ಫುಲ್‌ಬನ್' |
| | | 'ಕುರ್ಬಯಾ' |

| | |
|---|---|
| | 'ರಿಸಾಲಾ-ಇ-ತಸಾವ್ವುಫ್' |
| | 'ವೃಮುದಿಯಾ' |
| ೪. ಅಮೀನುದ್ದೀನ್ ಅಲಾಶಾಹ II | 'ಮುಖಜಾನ್-ಅಲ್-ಅಮೀನ್' |
| ೫. ಬಹರಿ ಮಹಮೂದ | 'ಅರ್ಷ-ಇ-ಇರ್ಫಾನ್' |
| | 'ಬಂಗಾಬ ನಾಮಾ' |
| | 'ಮನಲಗನ' |
| | 'ಮಸ್ನವಿ'ಗಳು |
| ೬. ಬುರ್ಹಾನುದ್ದೀನ್ ಜಾನಂ | 'ಬಶಾರತ-ಅಲ್-ಜಿತ್ರ' |
| | 'ಹುಜ್ಜತ-ಅಲ್-ಬಾಕ' |
| | 'ಇಶರದ-ಅಲ್-ತಾಲಿಬಿನ್' |
| | 'ಇರ್ಶಾದ ನಾಮಾ' |
| | 'ಕಲಿಮಾತ-ಅಲ್-ಹಕಾಯಿಕ್' |
| | 'ಮುಖಜಾನ್-ಇ-ಸಲಾಕಿಂ' |
| | 'ಮನಫಾತ-ಅಲ್-ಇಮಾಮ' |
| | 'ನಾಸಿಮ ಅಲ್ ಕಲಾಮ' |
| | 'ಸುಕ್ತಾ ಇ ವಹಿದ' |
| | 'ರುಮುಜ್ ಅಲ್ ವಸ್ಲಿಂ' |
| | 'ಸುಖ ಸಹೇಲಾ' |
| | 'ವಸೀಯತೆ ಅಲ್ ಹಾದಿ' |
| | 'ವೃಮುದಿಯಾ' |
| | 'ಕಶ್ಫ ಅಲ್ ವೃಜೂದ್' |
| ೭. ಕಮಾಲುದ್ದೀನ್ ಬೈಬಾನಿ | 'ಜಾಹರ ಶಾಹವತ್' |
| ೮. ಕಾಸಿಮ ಮುಹಮ್ಮದ | 'ನಫಾಯಿಸ್-ಅಲ್-ಅನ್‌ಫಾಸ್' |
| ೯. ಖುಶ್ ದಹಾನ ಶೇಖ ಮಹಮೂದ | 'ಅಸ್ರಾರ್ ಅಲ್ ಹಕ್' |
| | 'ಮಾರಿಫತ್ ಅಲ್ ಸುಲುಕ್' |
| | 'ರಿಸಾಲಾ-ಯಿ-ಮುಖ್ತಾಸರ್' |
| | 'ಸಲಾತ-ಇ-ಅಶಿಕಿನ್' |
| | 'ಜಾಹುಂ ವೃಜುದ್' |
| | 'ಮಗಜ-ಇ-ಮರ್ಗೂಬ್' |
| ೧೦. ಜುಬೇರಿ ಮೌಲಾನ ಮಹ್ಮನ | 'ಕಶ್ಫ ಅಲ್ ಅಸ್ರಾರ್' |
| ೧೧. ತಾಹಿರ್ ಬಿ-ಉಬಲಿ ಸಯ್ಯದಿ | 'ಕಂಜಲ್ ನಫಾಯಿಸ್' |
| ೧೨. ಶಾಹ ಮಿರಾಂಜಿ | 'ಖುಶ್‌ನಾಮಾ' |
| | 'ಖುಶ್‌ನಗ್ಜ' |

| | | |
|---|---|---|
| | | 'ಶಹಾದತುಲ್-ಹಕೀಕತ್' |
| | | 'ಶಾಹಮಗರ್ಣಬುಲಿ' |
| | | 'ಸಬರಸ' |
| ೧೩. | ಸಾದಿಕ ಮೀರ ಮಹಮ್ಮದ | 'ಶಮ್ಮಿಲ್-ಹಕಾಯಿಕ್' |
| ೧೪. | ಅಲಿಪೀಟು ಹುಸೇನಿಶಾಹ | 'ಸಹೇಲಾ' |
| ೧೫. | ಫರೂಕಿ | 'ಚಕ್ಕೀನಾಮಾ'* |
| ೧೬. | ಗೌಸೀ | 'ಚಕ್ಕೀನಾಮಾ' |
| ೧೭. | ಹಾಸಿಮ್ ಖುದಾವಂದ | 'ಚಕ್ಕೀನಾಮಾ' |
| ೧೮. | ಕಮಾಲ | 'ಚಕ್ಕೀನಾಮಾ' |
| ೧೯. | ಕಮ್ತಾಲ | 'ಚರ್ಖಾನಾಮಾ' |
| ೨೦. | ಸಾಲಾರ | 'ಚರ್ಖಾನಾಮಾ' |
| ೨೧. | ಶಾಹರಾಜು | 'ಸುಹಾಗನ್ ನಾಮಾ' |
| . | ಅಮೀನುದ್ದೀನ್ ಆಲಾ | 'ಚಕ್ಕೀನಾಮಾ' |
| . | ಬಹರಿ ಮಹಮ್ಮದ | 'ಲಶ್ಕರನಾಮಾ' |



---

* ಚಕ್ಕೀನಾಮಾ ಎಂದರೆ 'ಬೀಸುವಕಲ್ಲಿನ ಪದಗಳು' ಇಲ್ಲಿ ಇದು ಒಂದು ಬಗೆಯ ಜಾನಪದ ಸಾಹಿತ್ಯ ರೂಪದಲ್ಲಿರುವ ಅನುಭಾವ ಸಾಹಿತ್ಯ

ಅಧ್ಯಾಯ ನಾಲ್ಕು

# ಕನ್ನಡ ಸಾಹಿತ್ಯ

ವಿಜಾಪುರ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶವು ಎಂದಿನಿಂದಲೂ ಕರ್ನಾಟಕದ ಒಂದು ಭಾಗವಾಗಿದೆ. ಆದ್ದರಿಂದ ಇಲ್ಲಿಯ ಭಾಷೆ ಕನ್ನಡವಾಗಿರುವುದೂ ಅಷ್ಟೇ ಸಹಜವಾಗಿದೆ. ಈ ಪ್ರದೇಶದಲ್ಲಿ ಹುಟ್ಟಿದ ಅನೇಕ ಕವಿಗಳು ವಚನಕಾರರು, ಹರಿದಾಸರು ಶ್ರೇಷ್ಠ ಸಾಹಿತ್ಯವನ್ನು ರಚಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ. ಆದಿಲಶಾಹಿ ಪೂರ್ವದ ಕವಿಗಳಾದ ರನ್ನ, ನಾಗಚಂದ್ರ, ಬಸವಣ್ಣ ಮೊದಲಾದವರು ಇಲ್ಲಿಯ ಕೆಲವು ಶ್ರೇಷ್ಠರು.

ಬಹಮನಿ, ಆದಿಲಶಾಹಿ ರಾಜ್ಯಗಳ ಆಡಳಿತದಲ್ಲಿ ಕನ್ನಡ ಭಾಷೆಯ ಪರಿಸ್ಥಿತಿ ಏನಿತ್ತು? ಪರ್ಶಿಯನ, ದಖಣಿ ಭಾಷೆಗಳಲ್ಲಿ ಹುಲುಸಾಗಿ ಬೆಳೆದ ಸಾಹಿತ್ಯವನ್ನು ಅವಲೋಕಿಸಿದಾಗ, ಇಲ್ಲಿ ಕನ್ನಡ ಭಾಷೆ ಇರಲೇ ಇಲ್ಲವೇ? ಎಂಬ ಸಂಶಯಕ್ಕೆ ಕಾರಣವಾಗಬಹುದು. ಆದರೆ ಪರಿಸ್ಥಿತಿ ಹಾಗಿರಲಿಲ್ಲ. ಆದಿಲಶಾಹಿಗಳ ಕಾಲದಲ್ಲಿಯೇ ಸಮಕಾಲೀನ ವಿಜಯನಗರ ಸಾಮ್ರಾಜ್ಯದಲ್ಲಿ ಆಶ್ರಯ ಪಡೆದ ಅದೃಶ್ಯ ಕವಿ ಹತ್ತಿರದ ಕೊಲ್ಹಾರದವನು. ಅವನ 'ಪ್ರೌಢ ದೇವರಾಯನ ಕಾವ್ಯ' ಪ್ರಸಿದ್ಧವಾಗಿದೆ. ಅದರಂತೆ ತೊರವೆಯ ನರಹರಿಯ 'ತೊರವೆ ರಾಮಾಯಾಣ' ಇನ್ನೊಂದು ಜನಪ್ರಿಯ ಕೃತಿ ರಚಿತವಾದದ್ದು ಈ ಕಾಲದಲ್ಲಿಯೆ.

ವಿಜಯನಗರ ಪತನಾ ನಂತರ ಇಲ್ಲಿ ಕನ್ನಡ ಹಾಗೂ ಹತ್ತಿರದ ಮರಾಠಿ ಭಾಷೆಗಳಿಗೆ ರಾಜಾಶ್ರಯವಿದ್ದ ಸ್ಪಷ್ಟ ಉಲ್ಲೇಖಗಳಿಲ್ಲ. ಎರಡನೆಯ ಇಬ್ರಾಹಿಮ ಆದಿಲಶಹನು ಅಂತೂ ಪಂಡಿತನೊಂದಿಗೆ. ಆಸ್ಥಾನದಲ್ಲಿ ಮರಾಠಿ ಭಾಷೆಯಲ್ಲಿಯೆ ಮಾತನಾಡುತ್ತಿದ್ದನೆಂದು ಮೊಗಲ ರಾಯಭಾರಿ ಅಸದ ಬೇಗನು ತನ್ನ ನೆನಪುಗಳಲ್ಲಿ ಬರೆದಿಟ್ಟಿದ್ದಾನೆ.

ಮರಾಠಿಯ ವಾಮನ ಪಂಡಿತ, ತುಕಾರಾಮ ಹಾಗೂ ರಾಮದಾಸರ ಸಾಹಿತ್ಯ ಸೃಷ್ಟಿ ಪ್ರಾರಂಭವಾದದ್ದು ವಿಜಾಪುರದಿಂದ. ಅದರಂತೆ ಕನ್ನಡ ಭಾಷೆಯಲ್ಲಿ ಕೃತಿಗಳನ್ನು ರಚಿಸಿದ ಕವಿಗಳ ಒಂದು ದೊಡ್ಡ ಪಟ್ಟಿಯನ್ನೆ ಉದಾಹರಿಸಬಹುದು. ವಿಜಾಪುರದ ರುಕ್ಮೊ ಪಂಡಿತರು, ಸಿಂದಗಿಯ ಭೀಮಾಶಂಕರ, ಜಕ್ಕಪ್ಪಯ್ಯ, ಶಿವರಾಮ, ಕಾಖಂಡಕಿಯ ಮಹಿಪತಿದಾಸ, ಕೃಷ್ಣದಾಸ, ಯತಿರಾಯ ಶ್ರೀಪತಿ, ಶ್ರೀಪತಿತನುಜ, ಅಲ್ಲದೆ ಚಿದಾನಂದ ಅವಧೂತ ಮುದ್ಗಲ್ ಕೃಷ್ಣದಾಸ ಗಲಗಲಿಯ ಅವ್ವ, ಪ್ರಯಾಗಾಬಾಯಿ ಇತ್ಯಾದಿ ಸ್ತ್ರೀಪುರುಷರು ಕನ್ನಡದಲ್ಲಿ ಸಾಹಿತ್ಯವನ್ನು ರಚಿಸಿದ್ದಾರೆ.

ದೇಶೀ ಭಾಷೆಗಳಲ್ಲಿಯ ಸಾಹಿತ್ಯದ ಒಂದು ವೈಶಿಷ್ಟ್ಯವೆಂದರೆ, ಇಲ್ಲಿಯ ಕವಿ ಸಾಹಿತಿಗಳು ತಮ್ಮ ಕೃತಿಗಳಲ್ಲಿ ಬಹು ಭಾಷೆಗಳನ್ನು ಉಪಯೋಗಿಸಿರುವುದು. ಇನ್ನೊಂದು

ಭಾಷೆಯ ಪ್ರಭಾವ ದಟ್ಟವಾದಾಗ ಆ ಭಾಷೆಯ ಶಬ್ದಗಳು ಸ್ಥಳೀಯ ಭಾಷೆಯ ಕೃತಿಗಳಲ್ಲಿ ಬರುವುದು ಅಚ್ಚರಿಯ ವಿಷಯವೇನಲ್ಲ. ಆದರೆ ಮೂರು ನಾಲ್ಕು ಭಾಷೆಗಳನ್ನು ಉಪಯೋಗಿಸಿ ಕೃತಿಗಳನ್ನು ರಚಿಸಿರುವುದು ಚೋದ್ಯವೇ ಸೈ.

ಸ್ಥಳೀಯ ವಾತಾವರಣದಲ್ಲಿ ಬಹುತೇಕ ಹಿಂದು ಪಂಡಿತ ಮಾನ್ಯರು ಬಹು ಭಾಷಾ ವಿಶಾರದರಾಗಿದ್ದರು. ಪರ್ಶಿಯನ್, ದಖಣಿ, ಮರಾಠಿ ಕನ್ನಡ ಹಾಗೂ ತೆಲುಗು ಭಾಷೆಗಳಲ್ಲಿ ಪರಿಣಿತರಾಗಿದ್ದ ಪಂಡಿತರನ್ನು ಕವಿಗಳನ್ನು ದಾಸರನ್ನು ಆ ಕಾಲದ ವಿಜಾಪುರದಲ್ಲಿ ಕಾಣುತ್ತೇವೆ.

ವಿಜಾಪುರದ ರುಕ್ಮಾಂಗದ ಪಂಡಿತರು ಅಪರಿಮಿತ ಗ್ರಂಥಗಳನ್ನು ಬರೆದಿದ್ದಾರೆಂದೂ, ಅವರು ಪ್ರಾಕೃತ, ಸಂಸ್ಕೃತ ಕನ್ನಡ, ಹಿಂದಿ, ದ್ರವಿಡ, ಅರಬಿ ಹಾಗೂ ತೆಲುಗು ಭಾಷೆಗಳಲ್ಲಿ ಕರುಣಪರವಾದ, ಶೃಂಗಾರರಸಪೂರಿತವಾದ ಹಾಗೂ ಆಧ್ಯಾತ್ಮ ಪರವಾದ ಕೃತಿಗಳನ್ನು ರಚಿಸಿದ್ದಾರೆ ಎಂದೂ ಅವರ ಚರಿತ್ರೆಯನ್ನು ಬರೆದ ರುಕ್ಮಜದಾಸ (ಕ್ರಿ.ಶ. ೧೮೦೦) ಹೇಳುತ್ತಾನೆ. ಅವರು ಬಹು ಭಾಷೆಗಳಲ್ಲಿ ಕೃತಿಗಳನ್ನು ರಚಿಸಿರುವ ಸಾಧ್ಯತೆಯೂ ಇದೆ. ಕನ್ನಡ, ಮರಾಠಿ ಸಂಸ್ಕೃತ ಕೃತಿಗಳು ದೊರೆತಿವೆ. ಕೆಲವು ಪ್ರಕಟವೂ ಆಗಿವೆ.

ಮಹಿಪತಿರಾಯರ ಕೃತಿಗಳು ಪ್ರಕಟವಾಗಿವೆ. ಸಾವಿರದಷ್ಟು ಕೃತಿಗಳನ್ನು ರಚಿಸಿದ್ದಾರೆ. ಅವರು ತಮ್ಮ ಕೆಲವು ಕೃತಿಗಳಲ್ಲಿ ಬಹುಭಾಷೆಗಳನ್ನು ಉಪಯೋಗಿಸಿದ್ದಾರೆ. 'ಬಾಟ ಪಕಡೋ ಸೀದಾ' ಎಂಬ ಕೃತಿಯಲ್ಲಿ ಮೂರು ಭಾಷೆಗಳನ್ನು 'ಸಮಜೋ ಭಾ ಯಿ ಸಕುನಾ ಚಾರೋ ಖುದಾಕಾ' ಎಂಬ ಕೃತಿಯಲ್ಲಿ ಐದು ಭಾಷೆಗಳನ್ನು ಉಪಯೋಗಿಸಿದ್ದಾರೆ.

ಮಹಿಪತಿರಾಯರ ಮಗ ಕೃಷ್ಣದಾಸರು ಕೂಡ ಸಾವಿರದಷ್ಟು ಕೃತಿಗಳನ್ನು ಜೊತೆಗೆ ಹತ್ತಾರು ಆಖ್ಯಾನಗಳನ್ನು, 'ಅಧ್ಯಾತ್ಮ ರಾಮಾಯಣ' ಕಾವ್ಯವನ್ನು ರಚಿಸಿದ್ದಾನೆ. ಅವರ ಮನೆತನದ ಮುಂದಿನ ಮೂರು ತಲೆಮಾರುಗಳವರೆಗೆ ಅನೇಕ ಜನ ಕೀರ್ತನೆಗಳನ್ನು ಬರೆದಿದ್ದಾರೆ.

ಸಿಂದಗಿ ಜಕ್ಕಪ್ಪಯ್ಯನ 'ಅಗ್ನಿ ಪರೀಕ್ಷೆ' ಖಂಡ ಕಾವ್ಯವು ಕನ್ನಡ ಮರಾಠಿ ದ್ವಿಭಾಷೆಯಲ್ಲಿದೆ. ಒಂದೇ ಕಥೆಯನ್ನು ಎರಡು ಭಾಷೆಗಳಲ್ಲಿ ಹೇಳುತ್ತ ಹೋದ ಉದಾಹರಣೆ ಬಹುಶಃ ಬೇರೆ ಯಾವ ಭಾಷೆಗಳ ಇತಿಹಾಸದಲ್ಲೂ ದೊರೆಯಲಿಕ್ಕಿಲ್ಲ. 'ಶ್ರೀರಾಮಚಂದ್ರ ಅನುಸಂಧಾನ' ಅಥವಾ 'ಅಗ್ನಿ ಪರೀಕ್ಷೆ' ಎಂಬ ಹೆಸರಿನ ಈ ಕಾವ್ಯವು ಮರಾಠಿ ಚಾಮರಿ ವೃತ್ತದಲ್ಲಿ ಪ್ರಾರಂಭವಾಗುತ್ತದೆ. ಐದು ನುಡಿಗಳ ದೇವತಾ ಸ್ತುತಿಯ ಅನಂತರ ಕಥೆಯನ್ನು ಕನ್ನಡ ವಾರ್ಧಕ ಷಟ್ಪದಿಯಲ್ಲಿ ಮುಂದುವರಿಸಲಾಗಿದೆ. ಅನಂತರ ಮತ್ತೆ ಮರಾಠಿ ಹೀಗೆ ಕಥೆ ಸಾಗುತ್ತದೆ. ಕನ್ನಡದ ವಿವಿಧ ಷಟ್ಪದಿ ಕಂದ ಹಾಗು ಪದಗಳನ್ನು ಬಳಸಿದ್ದರೆ ಮರಾಠಿಯಲ್ಲಿ ವಿವಿಧ ವೃತ್ತ ಶ್ಲೋಕ ಇತ್ಯಾದಿಗಳನ್ನು ಕವಿ ಬಳಸಿದ್ದಾನೆ.

ಭಕ್ತಿ ಪರವಾದ ಗೀತ ಪದ್ಯಗಳು ಮತ್ತು ಪ್ರಮೇಯ ಭಾಗಗಳನ್ನು ಕನ್ನಡ ಭಾಷೆಯಲ್ಲಿ ಪಾಮರರಿಗೂ ತಿಳಿಯುವಂತೆ ಹಾಡಿನ ರೂಪದಲ್ಲಿ ಬರೆದು ಪ್ರಸಿದ್ಧರಾದವರು ಗಲಗಲಿ ಅವ್ವನವರು ಹಾಗೂ ಅವರ ಶಿಷ್ಯ ಪ್ರಯಾಣ ಬಾಯಿಯದು. ಹೀಗೆ ಕನ್ನಡದಲ್ಲಿಯು ಅಂದಿನ ದಿನಗಳಲ್ಲಿ ಸಾಹಿತ್ಯ ನಿರ್ಮಾಣವಾದದ್ದು ಕಂಡು ಬರುತ್ತದೆ.

# ಟಿಪ್ಪಣಿಗಳು

೧. Letter from H.B.E. Frere Esq Commissioner in Satara of dated 17-12-1849 to a Malet Chief Secretary to Government of Bombay. Reproduced in Bombay Government Memoir on the Satara Territory by T. Ogilvy pp 210-219.

೨. ಇಲಿಯಡ್ ಮತ್ತು ಡೌಸನ್ ಸಂಪುಟ-೬ ಪುಟ ೨೧೦.

೩. ಪರ್ಶಿಯನ್ ಲಿಥೋಗ್ರಾಫ್ (೨ ಸಂಪುಟಗಳು) ನವಲಕಿಶೋರ, ಲಖನಾ (೧೮೯೪-೯೫).

೪. ಇಂಗ್ಲಿಷ್ ಅನುವಾದ ಜಾನಾ ಬ್ರಿಗ್ಸನ History of the Rise of the Mohammedian Power in India 4 vols London 1829. Reprinted in 3 vols calcutta Editions India 1966.

೫. ಜುಬೇರಿ-ಬಸಾತೀನ್-ಅಲ್-ಸಲಾತೀನ (ಮರಾಠಿ ಅನುವಾದ) ಪುಟ ೧೦೧-೧೦೨.

೬. ಅದೇ ಪುಟ ೧೦೨.

೭. ೧. ಸಾಲಾರಜಂಗ ವಸ್ತು ಸಂಗ್ರಹಾಲಯ ಹೈದರಾಬಾದ ಹಸ್ತ ಪ್ರತಿ ತಾರೀಖ ನಂ. ೧೪೨ ಬರೆದದ್ದು ಕ್ರಿ. ಶ. ೧೬೦೮-೯ ನಕಲು ೧೭೩೫-೩೬. ೧೮೪ ಹಾಳೆಗಳು.

೨. ಅಸಫಿಯಾ ಲಾಯಬ್ರರಿ, ಹೈದರಾಬಾದ, ನಕಲು ತಾರೀಖ ನಂ. ೧೦೮೧

೩. ಬ್ರಿಟಿಷ್ ಮ್ಯೂಜಿಯಂ ಲಂಡನ್ ನಂ. ೨೩, ೮೮೩

೮. ಕ್ರ. ಸಂ. ೭೨೭ ನಕಲು ಮಾಡಿದ ಕಾಲ ಕ್ರಿ. ಶ. ೧೭೮೧ ೪೯೦ ಪುಟಗಳು.

೯. ಪರ್ಶಿಯನ್ ಹಸ್ತ ಪ್ರತಿ ಬ್ರಿಟಿಷ್ ಮ್ಯೂಜಿಯಂ ಲಾಯಬ್ರರಿ ಲಂಡನ್ ಕ್ರ.ಸಂ. add ೨೬, ೨೩೪.

೧೦. ವಾಸ್ತವದಲ್ಲಿ ಎರಡನೆಯ ಅಲಿ ಆದಿಲಶಹನು, ಮಹ್ಮದ ಆದಿಲಶಹನ ಪಟ್ಟದ ರಾಣಿಯರ ಹೊಟ್ಟೆಯಲ್ಲಿ ಹುಟ್ಟಿದವನು ಅಲ್ಲವೆಂದೂ, ಒಬ್ಬ ದಾಸಿಯ ಪುತ್ರನೆಂಬ ಹೇಳಿಕೆ ಇದೆ. ಆ ಕಾರಣದಿಂದಲೇ ಆತ ಪಟ್ಟಕ್ಕೆ ಬಂದ ಮೇಲೆ ಆತನು ಆದಿಲಶಾಹಿಗಳ ಉತ್ತರಾಧಿಕಾರಿ ಅಲ್ಲವೆಂದು ಮೊಗಲರ ಔರಂಗಜೇಬನು ಪ್ರಸ್ತಾಪಿಸಿ ಆ ದಿನಗಳಲ್ಲೆ ರಾಜ್ಯವನ್ನು ಮೊಗಲ ಸಾಮ್ರಾಜ್ಯಕ್ಕೆ ಸೇರಿಸಬೇಕೆಂಬ ಪ್ರಸ್ತಾಪವನ್ನಿಟ್ಟಿದ್ದನು. ಬಹುಶ ಈ ವಿಷಯವನ್ನು ಪರ್ಯಾಯವಾಗಿ ನೂರುಲ್ಲಾ ಹೀಗೆ ಹೇಳಿರಬಹುದು.

೧೧. ಈ ಸಂದರ್ಭವನ್ನು ತುಂಬ ವಿಸ್ತಾರವಾಗಿ ಅನೇಕ ಕೋಟೆ ಕೊತ್ತಲಗಳ ಹೆಸರುಗಳು, ಮಲೆನಾಡಿನ ಜನರ ಶೌರ್ಯ ಧೈರ್ಯಗಳೊಂದಿಗೆ ವರ್ಣಿಸಿದ್ದಾನೆ. ವಿಸ್ತಾರಭಯದಿಂದ ಇಲ್ಲಿ ಸಂಕ್ಷೇಪಗೊಳಿಸಲಾಗಿದೆ– ಲೇಖಕ.

೧೨. ಇಂಡಿಯಾ ಆಫೀಸ ಲಾಯಬ್ರರಿ ಲಂಡನ್ನಿನಲ್ಲಿ ಈ ಗ್ರಂಥದ ನಾಲ್ಕು ಪ್ರತಿಗಳಿದ್ದು, ಬ್ರಿಟಿಷ್ ಮ್ಯೂಜಿಯಂ ದಲ್ಲಿ ಎರಡು ಪ್ರತಿಗಳಿವೆ. ಭಾರತದಲ್ಲಿ ಈ ಗ್ರಂಥದ ಪ್ರತಿಗಳು ಕ್ವಚಿತ್ತಾಗಿ ದೊರೆಯಬಹುದು.

ಇಂಡಿಯಾ ಆಫೀಸ, ಲಂಡನ್, ಹಸ್ತ ಪ್ರತಿ ಕ್ರ. ಸಂ. ೪೫೦.

೧೩. ಪರ್ಶಿಯನ್ ಹಸ್ತ ಪ್ರತಿ ಇಂಡಿಯಾ ಆಫೀಸ ಲಾಯಬ್ರರಿ ಲಂಡನ್‌ದಲ್ಲಿದೆ. ಅದರ ಫೋಟೋ ಪ್ರತಿಯ ಆಧಾರದಿಂದ ಮರಾಠಿಯಲ್ಲಿ ಸಂಕ್ಷಿಪ್ತ ಅನುವಾದವನ್ನ ಶಿವಚರಿತ್ರ ೨ನೆಯ ಖಂಡ ಫಾರ್ಸೀ ವಿಭಾಗದಲ್ಲಿ ಶ್ರೀ ಗಣೇಶ ಹರಿಖರೆಯವರು ಸಂಪಾದಿಸಿ ೧೯೩೯ರಲ್ಲಿ ಪ್ರಕಟಿಸಿದ್ದಾರೆ. ಭಾರತ ಹಾಗೂ ಇತರ ದೇಶಗಳಲ್ಲೂ ಇದರ ಪ್ರತಿಗಳು ಇರುವ ಸಂಭವವಿದೆಯೆಂದು ಹೇಳಲಾಗುತ್ತದೆ.

೧೪. ಒಂದೇ ಒಂದು ಹಸ್ತಪ್ರತಿ ದೊರೆತಿದ್ದು ಅದು ಲೇಖಕನ ಹತ್ತಿರ ಇದೆ.

೧೫. ಕನ್ನಡದಲ್ಲಿ ಮೊದಲ ಬಾರಿಗೆ ಮೂಲ ಕಾವ್ಯವನ್ನು ಸಂಪಾದಿಸಿ ವಿವರವಾದ ಟಿಪ್ಪಣಿಗಳನ್ನೊಳಗೊಂಡ ಡಾ. ಕೃಷ್ಣಕೊಲ್ಹಾರಕುಲಕರ್ಣಿಯವರ ಕಿತಾಬೆ–ನೌರಸ ಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಅವರು ೧೯೬೬ರಲ್ಲಿ ಪ್ರಕಟಿಸಿದ್ದಾರೆ. ಅನಂತರ ಕರ್ನಾಟಕ ಉರ್ದು ಅಕಾಡೆಮಿಯು ಪ್ರೊ. ಅಬ್ದುಲ ಮಜೀದ್ ಖಾನರಿಂದ ಸಂಪಾದಿತ, ಕನ್ನಡ ಅನುವಾದ ಸಹಿತ ಕಿತಾಬ–ಎ–ನೌರಸ ವನ್ನು ೧೯೯೭ರಲ್ಲಿ ಪ್ರಕಟಿಸಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ.

ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಪುಸ್ತಕ 'ಆದಿಲಶಾಹಿ ಆಸ್ಥಾನಸಾಹಿತ್ಯ'.

ಈವರೆಗೆ ಉಪೇಕ್ಷೆಗೆ ಗುರಿಯಾಗಿದ್ದ ವಿಜಾಪುರದ "ಆದಿಲಶಾಹಿ ಆಸ್ಥಾನಸಾಹಿತ್ಯ"ವನ್ನು ಮೊದಲ ಬಾರಿಗೆ ಕನ್ನಡಿಗರಿಗೆ ಪರಿಚಯಿಸುತ್ತಿರುವುದು ಕನ್ನಡ ವಿಶ್ವವಿದ್ಯಾಲಯದ ಸಮಗ್ರ ಸಂಸ್ಕೃತಿ ನೀತಿಗೆ ನಿದರ್ಶನವೆನಿಸಿದೆ.

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು